# ಮಿಂಚಿನ ಬಳ್ಳಿ

ಸಂಪಾದಕ:-
ಬುರ್ಲಿ ಬಿಂದುಮಾಧವ

# ಸೈನಿಕ-ಉವಾಚ

ಲೇಖಕರು: ನೆಂ. ಮು. ಜೋಶಿ



೩೮

ಮಿಂಚಿನಬಳ್ಳಿಯ ೨೦ನೇ ವರ್ಷದ ಎರಡನೆಯ ಕುಡಿ

# ಸೈನಿಕ-ಉವಾಚ

ಲೇಖಕರು :

ವೆಂ. ಮು. ಜೋಶಿ



ಮಿಂಚಿನಬಳ್ಳಿ ಕಾರ್ಯಾಲಯ,
ಧಾರವಾಡ



ಪ್ರಜಾರಾಜ್ಯದಿನ
೨೬ ಜನವರಿ ೧೯೫೮



ಉತ್ತಮ ಪ್ರತಿ
ರೂ. ೨-೦೦

[illegible] ಪೈಸಾ

ಮುದ್ರಕರು :
ಎಂ. ಜಿ. ಪಾಲೇಕರ
ವಸಂತ ಮುದ್ರಣಾಲಯ,
ಧಾರವಾಡ



---

## ಮುಂಬರುವ ಗ್ರಂಥಗಳು

೧) ಕಾವ್ಯಶಾಸ್ತ್ರವಿನೋದ
೨) ಅಂತರರಾಷ್ಟ್ರೀಯ ರಾಜಕಾರಣ
೩) ಶ್ರೀ ಮಧ್ವಮುನಿ ವಿಜಯ

ಇತ್ಯಾದಿ

---

## ಮಿಂಚಿನಬಳ್ಳಿಯ ಚಂದಾ ವಿವರ :

ವರ್ಷಕ್ಕೆ ೬೦೦ ಪುಟಗಳು ೪ ಗ್ರಂಥ
ಸಾದಾ, ಅಂಚೆ ಸಹಿತ ೬-೮-೦
ರಜಿಸ್ಟರ, ಅಂಚೆ ಸಹಿತ ೮-೮-೦

ವರ್ಷಾರಂಭ ವಿಜಯದಶಮಿ (ಅಕ್ಟೋಬರ)

ಟೀಪು:- ವ್ಹಿ. ಪಿ. ಚಾರ್ಜ ಪ್ರತ್ಯೇಕ.

ಪ್ರಕಾಶಕರು :
ಬುರ್ಲಿ ಬಿಂದುಮಾಧವ
ಮಿಂಚಿನಬಳ್ಳಿ ಕಾರ್ಯಾಲಯ,
ಧಾರವಾಡ

# ನೆ ನ ಹಿ ಗ ಳು



ಮಾರ್ಗ ಕ್ರಮಣದಲ್ಲಿ ಒಂದು ಘಟ್ಟವನ್ನು ಏರಿದ ಬಳಿಕ ಅಲ್ಲಿ ಕ್ಷಣ ಕಾಲ ತಡೆದು ನಿಂತು ನಡೆದುಬಂದ ದಾರಿಯನ್ನು ಮರಳಿ ನೋಡುವ-ನೆನೆದು ಕೊಳ್ಳುವ ಆಸೆಯುಂಟಾಗದವರೆ ವಿರಳ. ಎಷ್ಟೋ ಬಾರಿ ಮುಂದಿನ ದಾರಿ ಸಾಗದಾದಾಗ, ಹಿಂದಿನದನ್ನು ನೆನೆವುದು— ಕನವರಿಸುವುದು ಇದೊಂದು ಚಟವಾಗಿ ಪರಿಣಮಿಸುವುದು !

ಹೀಗಿದ್ದರೂ ತಮ್ಮ ಬಾಳಿನ ನೆನಹುಗಳನ್ನು ದಿನಚರಿ, ಜೀವನಸ್ಮೃತಿ, ಆತ್ಮ ಚರಿತೆಗಳ ರೂಪದಲ್ಲಿ ಬರೆದಿಡುವ ವಾಡಿಕೆಯು ನಮ್ಮ ಜನಗಳಲ್ಲಿ ಬೆಳೆದು ಬರಲಿಲ್ಲ. ಪರಮಾತ್ಮನಲ್ಲಿ ಮಾಡಿಕೊಂಡ ಆತ್ಮನಿವೇದನಪರಭಜನೆ, ಪ್ರಾರ್ಥನೆ ಗಳಲ್ಲಿ, ಈ ನೆನಹಿಯ ಸ್ವಲ್ಪ ಬಿಂಬವು ಅಸ್ಪಷ್ಟವಾಗಿ ಒಡಮೂಡಿರುವುದು ಕಂಡುಬರುತ್ತದೆ. ಕಾವ್ಯ ನಾಟಕಾದಿಗಳಲ್ಲಿಯೂ ಆತ್ಮಚರಿತೆಯ ಕೆಲವೊಂದು ಅಂಶವು ಅಡಕವಾಗಿರುತ್ತದೆಂಬುದು ಸುಳ್ಳಲ್ಲ. ಆದರೂ ಇವೆಲ್ಲವನ್ನೂ ಊಹಿಸಿ ಅರಿತುಕೊಳ್ಳಬೇಕಾಗುತ್ತದೆ. ಆದರಿಂದ ಅದರ ವಾಸ್ತವತೆಯು ಸಂದಿಗ್ಧ ವಾಗಿಯೆ ಉಳಿಯುವುದು. ಸಂಸಾರವನ್ನು ಮರೆತುಬಿಡುವುದೇ ಪರಮ ಜೀವನ ಸಿದ್ಧಿಯ ಒಂದು ಸಾಧನ ಎಂದು ನೆರೆನೆಮ್ಮಿದ ಜನಗಳಲ್ಲಿ ಐಹಿಕ ಘಟನೆಗಳನ್ನು ಬರೆದಿಡುವ ಅವಶ್ಯಕತೆಯೆನಿಸದಿದ್ದಲ್ಲಿ ಸೋಜಿಗವಲ್ಲ. ಸಂತರು–ವಿರಕ್ತರು– ಚತುರ್ಥಾಶ್ರಮಿಗಳು ತಮ್ಮ ಮುಂಚಿನ ಸಂಬಂಧ ಸೂತ್ರಗಳನ್ನು ಕಡಿದು ಕೊಳ್ಳಬೇಕೆಂಬ ವಿಧಿಯುಂಟು. ಮೊದಲಿನ ಲೌಕಿಕ ಹೆಸರನ್ನು ಬಿಟ್ಟು ಆದರ್ಶಕ್ಕೆ ಸಂಬಂಧಿಸಿದ ಹೊಸ ನಾಮಾಭಿಧಾನವನ್ನು ಧಾರಣ ಮಾಡುವುದು ರೂಢಿಯಾಗಿದೆ. ಏನೇ ಮಾಡಿದರೂ ಬದುಕಿರುವ ವರೆಗೆ ನೆನಹುಗಳ ಆವರಣ ದೊಳಗಿಂದ ಮುಕ್ತವಾಗಲು ಶಕ್ಯವೆ, ಎಂಬುದೇ ಮೂಲಭೂತ ಪ್ರಶ್ನೆಯಾಗಿದೆ. ಶಬ್ದದಾಚೆಯ ‘ ನಿಃಶಬ್ದ ’ ಲೋಕದಿಂದ ಭೂಲೋಕಕ್ಕೆ ಇಳಿದೊಡನೆ ಭಾಷೆಯ ಆಶ್ರಯ ಅನಿವಾರ್ಯವಾಗುತ್ತದೆ. ಈ ‘ ಭಾಷೆ ’ ಎಂದರೇನು ? ಹಿಂದಿನ(ವರ) ನೆನಹೇ. ಮುಂದಿನ ಮಾರ್ಗಕ್ರಮಣಕ್ಕೆ ಇದುವೆ ಆಧಾರ. ಭವಿಷ್ಯತ್ತಿನ ಕಗ್ಗತ್ತಲೆಯಲ್ಲಿ ತನ್ನ ದಾರಿಯನ್ನು ಕಂಡುಕೊಳ್ಳಲು ದೊರೆಯಲಿರುವ ಈ ಮಿಣುಕು ದೀಪವನ್ನು ತಿರಸ್ಕರಿಸಿ ಆರಿಸಿಬಿಡುವುದು ಯಾವ ಜಾಣ್ಮೆ ? ಹಿಂದಿನ

ಹಿರಿಯರ ಕೃತಿಗಳ ದಂತಕತೆ-ಪುರಾಣಗಳೇ ನಮ್ಮ ನಾಡಿಗರಿಗೆ ಈ ಸಂಸಾರ ಸಾಗರದಲ್ಲಿ ದಾರಿ ತೋರುವ ದೀಪಸ್ತಂಭಗಳಾಗಿವೆ. ಪುರಾಣಗಳ ಪರಿಭಾಷೆ-ಸಂಕೇತಗಳ ಅರ್ಥವು ಮರೆತು ಹೋದುದರಿಂದ ಆ ದೀಪಸ್ತಂಭಗಳಿಂದ ದೊರೆಯಬೇಕಾದ ಬೆಳಕು ಕ್ಷೀಣವಾಗಿದೆ. ಅವುಗಳ ಒಳಗಣ ಬೆಳಕನ್ನು ಕಂಡುಹಿಡಿಯಲು ಬಲ್ಲಿದರೇ ಇಂದು ಸಂಶೋಧನದಲ್ಲಿ ತೊಡಗಿದ್ದಾರೆ!

ನೆನಹಿಗಳ ಅಭಾವದಿಂದ ಹಿಂದಿನ ತಲೆಮಾರಿನವರ ಅನುಭವದ ಲಾಭವು ಮುಂದಿನ ಪೀಳಿಗೆಗೆ ದೊರೆಯದೆ ಹೋಗಿ ನಮ್ಮ ಸಮಾಜವು ವಾಸ್ತವ ಸತ್ಯಕ್ಕೆ ಎರವಾಗಿದೆ. ಪಾಶ್ಚಿಮಾತ್ಯರಲ್ಲಿ ಮಕ್ಕಳಿಗೆ ಚಿಕ್ಕಂದಿನಿಂದಲೇ ದಿನಚರಿಗಳನ್ನು ಬರೆದಿಡುವ ರೂಢಿ ಮಾಡಿಸುವುದುಂಟು. ದಿನಚರಿಗಳ ಮೂಲ ಉದ್ದೇಶ ಪ್ರಸಿದ್ಧಿಗಾಗಿಯಲ್ಲ. ಪ್ರಕಟಿಸುವ ಉದ್ದೇಶದಿಂದಲೇ ಬರೆದ ದಿನಚರಿಗಳು ಅಷ್ಟು ವಿಶ್ವಾಸಾರ್ಹವೆಂದು ಬಗೆಯುವುದು ಕಷ್ಟದ ಕೆಲಸವಾಗಿದೆ. ಬೇರೆ ಬೇರೆ ಪಂಗಡದ, ಸಮಕಾಲೀನರ ನೆನಹಿಗಳು ಪ್ರಕಟವಾಗುವವರೆಗೆ ಆ ನೆನಹುಗಳ ಸತ್ಯಾಸತ್ಯತೆ ತಿಳಿಯದು. ದಿನದ ವ್ಯವಹಾರದೊಳಗಿನ ಗಳಿಕೆ-ಬಳಿಕೆಗಳನ್ನು ಲೆಕ್ಕಿಸದವನ ವ್ಯಾಪಾರವು ಒಂದಿಲ್ಲೊಂದು ದಿನ ಆತನ ತಲೆ ತಿನ್ನದೆ ಇರಲಾರದು. ದಿನದ ವ್ಯವಹಾರದ ಟಿಪ್ಪಣಿ ಇಡದೆ ತನ್ನ 'ನಿಜ' ಸ್ಥಿತಿಯು ತಿಳಿಯಲಾರದು. ನಿಜವನ್ನು ಅರಿಯುವುದಕ್ಕಾಗಿ ಬರೆದಿಡತಕ್ಕ ಲೆಕ್ಕ (ಲೇಖ)ದಲ್ಲಿ ಸುಳ್ಳು ಅಥವಾ ಭ್ರಾಂತಿ ನುಸುಳಿಕೊಂಡಲ್ಲಿ ಪರವಂಚನೆಯ ದೋಷವಲ್ಲದೆ ಆತ್ಮವಂಚನೆಯ ಅಪರಾಧವೂ ಸಂಭವಿಸುವುದು.

ಪತ್ರಸಂಗ್ರಹ, ದಿನಚರಿ, ಅಥವಾ ಆತ್ಮಚರಿತ್ರೆಯ ರೂಪದ ಪ್ರಾಮಾಣಿಕ ನೆನಹಿಗಳನ್ನು ಪೂರ್ವಾಯುಷ್ಯದಲ್ಲಿ ಓದಲು ದೊರೆತಷ್ಟು ಒಳ್ಳೆಯದೇ. ಇದರಿಂದ ಲೋಕದ ಅಂತರಂಗದ ಇಂಗಿತದ ಅರಿವು ಮೂಡುವುದು. ನೆನಹಿಗಳನ್ನು ಬರೆದಿಡುವುದರಿಂದ ಯೋಧ, ಸಾಹಸಿ, ಸಂಸಾರಿ, ಸಾಹಿತಿ, ನಟ, ನಟಿ, ಕಂತ್ರಾಟದಾರ, ಕಾರಭಾರಿ, ಕೀರ್ತಿದಾಯಕ, ಕಡೆಗಣಿಸಲ್ಪಟ್ಟ ಕಿರುಕುಳ ಜೀವಿ ಮುಂತಾದ ಬಾಳಿನ ಎಲ್ಲ ಹಂತಗಳೊಳಗಿನ ಜೀವಿಗಳ ಅನುಭವಗಳು ಕಣ್ಣಾಳತೆಯಲ್ಲಿ ಬಂದು ವ್ಯಕ್ತಿಯ ವಿಚಾರ ಕ್ಷೇತ್ರವು ವಿಶಾಲವಾಗುತ್ತದೆ. ಬಾಳಿನ ಭವ್ಯತೆಯ ವಿರಾಟ ಸ್ವರೂಪದ ಸ್ಥೂಲ ದರ್ಶನವಾಗುತ್ತದೆ. ಕಾಲ ಮತ್ತು ಪರಿಸ್ಥಿತಿಯ ಎರಡೂ ತಡಿಗಳ ನಡುವಿನಿಂದ ಹಾಯ್ದು ಅನಂತದಲ್ಲಿ ಮುಖವಿರುವ ಜೀವನ-ಚೈತನ್ಯ ಪ್ರವಾಹವು ರಭಸದಿಂದ ಸಾಗಿರುವ ಚಿತ್ರವು

ಕಣ್ಣೆದುರು ನಿಲ್ಲುತ್ತದೆ. ವಿಶ್ವದ ಈ ಮಹಾಪ್ರವಾಹದಲ್ಲಿ ಹೋಟ ತಾನು ಏನು, ಯಾರು ಎಂಬ ಮೂಲ ಪ್ರಶ್ನೆಯು ತಲೆಯೆತ್ತಿ ತಾನೆ ತಾನಾಗಿ ನಿಲ್ಲುತ್ತದೆ!

ತನ್ನಲ್ಲಿರುವ 'ತಾನು' ಎಂಬುದು ಒಂದೆ ಇದೆಯೇ ಎಂಬ ಸಂದೇಹ ವುಂಟಾಗುವ ಪರಿಸ್ಥಿತಿಯು ಹಲವು ಬಾರಿ ಬರುವುದು. ಈ ಬಹುರೂಪಗಳಲ್ಲಿನ ಯಾವ 'ತಾನು' ನಿಜ? ಇವುಗಳಲ್ಲಿ ಯಾವುದಕ್ಕೆ ಎಷ್ಟು ಬೆಲೆ? ಈ ಬೆಲೆ ಕಟ್ಟುವ ಒರೆಗಲ್ಲು ಯಾವುದು? ಎಂಬಿವೇ ಮೊದಲಾದ ಮಹತ್ತ್ವದ ಪ್ರಶ್ನೆ ಗಳು ನಮ್ಮನ್ನು ಎದುರಿಸುವುವು.

ಇವುಗಳ ಉತ್ತರಗಳನ್ನು ಬಾಳಿ ತಿಳಿಯಬೇಕಲ್ಲದೆ ಹೆರವರ 'ನಕಲು' ಆತ್ಮಹಾನಿಗೆ ಕಾರಣವಾಗುತ್ತದೆ. ಇನ್ನೊಬ್ಬರ ಉತ್ತರವನ್ನು 'ಕಾಪಿ' ಮಾಡಿ (ಎಂದರೆ ಕದ್ದು) ಅದುವೆ ಸರಿಯಾದ ಉತ್ತರವೆಂದು ಗ್ರಹಿಸಿ ಕೊನೆಗೆ ತನ್ನ ಉತ್ತರವೂ 'ಅದೇ' ಆಗಿದೆ ಎಂದು ತೋರಿಸುವ ವಿದ್ಯಾರ್ಥಿಯ ಕಳ್ಳತ-ನವು ಬಹಳ ಹೊತ್ತು ಬಚ್ಚಿ ಉಳಿಯುವುದಿಲ್ಲ. 'ಕೊನೆಯ' ಭಾಗದಲ್ಲಿ ತೋರಿಸುವ 'ಬೆಲೆ'ಗೆ (ಆ ಉತ್ತರಕ್ಕೆ) ತಕ್ಕ ಹಾಗೆ ಪೂರ್ವಭಾವಿಯಾದ ಆವಶ್ಯಕವಾದ ಹೆಜ್ಜೆಗಳಲ್ಲಿ ಸರಿ ಹೋಗುತ್ತಿರುವುದಿಲ್ಲ!

ಲೆಕ್ಕದ ಮೊದಲಿನ ಭಾಗಕ್ಕೂ ಕೊನೆಯ ವಿವರಣೆಗೂ ತಾಳಮೇಳವೆ ಕಂಡುಬರುತ್ತಿರುವುದಿಲ್ಲ! ಈ 'ಪರ'ವಂಚನೆಯಲ್ಲಿ ಆತ್ಮವಂಚನೆಯೂ ಸಂಭ ವಿಸುವುದರಿಂದ ಸ್ವಂತದ್ದೇ ಹಾನಿಯಿದೆ. ಪ್ರತಿಯೊಂದು ವ್ಯಕ್ತಿಯ ಆವಶ್ಯಕತೆ ಗಳೂ, ಸಮಸ್ಯೆಗಳೂ ಬೇರೆ ಬೇರೆಯಾಗಿರುತ್ತವೆ. ಒಂದು ವ್ಯಕ್ತಿ ಇನ್ನೊಂದರ ನಕಲು ಅಥವಾ ಛಾಯೆ ಆಗಿ ಬಾಳುವವರೆಗೆ ಅದಕ್ಕೆ 'ಆತ್ಮ' ವಿಶ್ವಾಸವೆ ಉಂಟಾಗಲಾರದು. ಆತ್ಮದಲ್ಲಿ ವಿಶ್ವಾಸವಿಲ್ಲದವರು ಆಸ್ತಿಕರು. ಅವರು ಎಂತಹ ಶ್ರದ್ಧಾವಂತರೆಂದು ಎನಿಸಿಕೊಂಡರೂ ಅವರು ನಾಸ್ತಿಕರೇ ಸರಿ.

ನಮ್ಮಲ್ಲಿ ನೆನಹಿಗಳೂ ಈಗ ಬೆಳಕಿಗೆ ಬರುತ್ತಲಿವೆ. ಕಥೆ, ಕಾದಂಬರಿ, ನಾಟಕಗಳಂತೆ ಇದೂ ಒಂದು ಸಾಹಿತ್ಯದ ಪ್ರಕಾರವಾಗಿಬಿಟ್ಟಿದೆ. ಆದರೆ ಇದ ರಲ್ಲಿ ವಾಸ್ತವ ಘಟನೆ (facts)ಗಳೇ ಮೂಲಾಧಾರವಾಗಿರಬೇಕಾದುದರಿಂದ ಕಥಾವಸ್ತು ಮತ್ತು ಅದರಲ್ಲಿಯ ಘಟನೆಗಳ ಬಗೆಗೆ ಸ್ವಾತಂತ್ರ್ಯವಿರುವ ಲಲಿತ ಸಾಹಿತ್ಯದ ಪರಿಘದಲ್ಲಿ ಇದು ಸರಿಹೋಗುವುದಿಲ್ಲ. ಇತಿಹಾಸದಂತೆ ನೆನ-

ಹಿಯೂ ಸಾಹಿತ್ಯ ಮತ್ತು ಶಾಸ್ತ್ರದ ನಡುವಣ ವಿಷಯುವಾಗಿದೆ. ಸಂಗತಿಗಳ ಪಟ್ಟಿ ನೆನಹಿಯಲ್ಲ.

ಆದರಂತೆ ತನ್ನ ಮಾಟಮಾಳ್ಕೆಗಳ ಮಂಡನವಾಗುವಂತೆ ರಚಿತ ಕೃತಿಯೂ ನೆನಹಿಯೆನಿಸದು. ಬಾಳಿನಲ್ಲಿ ಒಂದೊಂದು ಘಟನೆ (ನಿಮಿತ್ತ) ಮೂಲಕ ತನ್ನ ಬುದ್ಧಿ ಭಾವನೆಗಳಲ್ಲಿ ಕಾಣಿಸಿಕೊಂಡ ಪ್ರತಿಕ್ರಿಯೆ ಯಾವುದು, ಆ ಸಂದರ್ಭದಿಂದ ತನ್ನ ಜೀವನದ ದೃಷ್ಟಿಯು ಮೇಲಾದ ಪರಿಣಾಮವು ಯಾವುದು, ತಾನು ಮೊದಲು ಹೊರಟುದು ಎತ್ತ, ಮುಂದೆ ನಡೆದುದು ಎತ್ತ ಎಂಬಿವೇ ಮೊದಲಾದ ಸಂಗತಿಗಳನ್ನು ಎಂದರೆ ಜೀವವು ಪಡೆದ ಸಂಸ್ಕಾರ ಗಳನ್ನು ವಾಸ್ತವ ಶೈಲಿಯಲ್ಲಿ ವಿವರಿಸುವುದೆ ನೆನಹಿಗಳ ಕಾರ‍್ಯವಾಗಿದೆ.

× × × ×

ನನ್ನ ತರುಣ ಮಿತ್ರರಾದ ಶ್ರೀ ವೆಂ. ಮು. ಜೋಶಿಯವರು ಸೈನಿಕನ ನೆನಹುಗಳನ್ನಿಲ್ಲಿ ಕಥೆಯಂತೆ ನಿರೂಪಿಸಿದ್ದಾರೆ. ಜೀವನ ಸಮಸ್ಯೆಗಳನ್ನು ಆ ಮೂಲಾಗ್ರವಾಗಿ ವಿಮರ್ಶಿಸಿ ವಿಚಾರಿಸಲು ಒತ್ತಾಯಪಡಿಸುವಂತಹ ಅನೇಕ ಘಟನೆಗಳು ಅವರನ್ನು ಎದುರಿಸಿದ್ದನ್ನು ಇಲ್ಲಿ ಕಾಣಬಹುದು. ಇನ್ನೂ ಪೂರ್ವ ವಯಸ್ಸು ಮನಸಿನ ಅನೇಕ ಸೂಕ್ಷ್ಮ ಪದರುಗಳ ಒಳಗಣ ಬಣ್ಣವಣ್ಣದ ಅಂದವನ್ನೂ (ಪ್ರಕಾರಗಳನ್ನೂ) ಬಿಡಿಸಿ ಬೇರ್ಪಡಿಸಿ ತೋರಿಸುವುದಕ್ಕೆ (ಅನು ಭವ ಸೂಕ್ಷ್ಮ ವಿಚಾರ ವಿಕಾಸವಾಗಿ) ವಯಸ್ಸು ಪಳಗಿದಂತೆ ಸಮಸ್ಯೆಗಳ ಉತ್ತರ ಪಡೆಯಲು ಸಮರ್ಥರಾಗುವರೆಂದು ನಂಬಿದ್ದೇನೆ.

ಈ ವಯಸ್ಸಿಗೆ ಬಾಳಿನಲ್ಲಿ ಇಷ್ಟು ವಿವಿಧ ಅನುಭವಗಳನ್ನು ಪಡೆದವರು ವಿರಳ. ಅನುಭವಿಸಿದ್ದನ್ನು ಸರಿಯಾಗಿ ವಿವರಿಸುವ ಶಕ್ತಿಯಿದ್ದವರು ಇನ್ನೂ ವಿರಳ. ಈಗಾಗಲೆ ಉದಿತೋದಿತ ಬರೆಹಗಾರರೆಂದು ಹೆಸರು ಪಡೆಯುತ್ತಿರುವ ಶ್ರೀ. ಜೋಶಿಯವರಿಂದ ನಮ್ಮ ಸಾಹಿತ್ಯಕ್ಕೆ ಇನ್ನೂ ಹೆಚ್ಚಿನ ಕಾಣಿಕೆ ದೊರೆಯ ಲೆಂದು ಹಾರೈಸಿದ್ದೇನೆ.

ಸಾಧನಕೇರಿ, ಧಾರವಾಡ
೨೬-೧-೧೯೫೮

ಶಂ. ಬಾ. ಜೋಶಿ

# ದಿಗ್ದರ್ಶನ



ಪ್ರಸ್ತುತ ಗ್ರಂಥ ಪ್ರಕಟವಾಗುತ್ತಿರುವದು ಒಂದು ಯೋಗಾಯೋಗವೇ. ಸೈನಿಕ ಜೀವನವನ್ನು ಅಧರಿಸಿಕೊಂಡು ಅನೇಕ ಕಥೆಗಳನ್ನು ಬರೆದ ಮೇಲೆಯೂ ಈ ಪುಸ್ತಕದ ಅವಶ್ಯಕತೆ ಇದ್ದಿತೇ? ಎಂದು ಒಂದು ಸಲ ವಿಚಾರಿಸಿದೆ. ಈ ವರೆಗೆ ಪ್ರಕಟವಾದ ಕತೆಗಳು, ಹಲವಾರು ಸೈನಿಕರ ಹಲವಾರು ಘಟನೆಗಳನ್ನು ಕುರಿತು ಬರೆದವುಗಳಾಗಿದ್ದವು. ಈಗ ಒಬ್ಬ 'ಕ್ಷ' ಸೈನಿಕ ತನ್ನ ಸೈನಿಕ ಜೀವನದ ಕೆಲ ಭಾಗದ ಅನುಭವಗಳನ್ನು ಅನುಕ್ರಮವಾಗಿ ನನ್ನೆದುರು ವಿವರಿಸಿದ್ದಾನೆ. ಅವನ ವಿವರಣೆಯೇ ಪ್ರಸ್ತುತಗ್ರಂಥ. ಈ ವಿವರಣೆಗಳು ಓದುಗನಿಗೆ ಅಪರಿಚಿತ ಕ್ಷೇತ್ರದ ಪರಿಚಯವನ್ನೂ ಸ್ವಲ್ಪಮಟ್ಟಿಗೆ ಮಾಡಿಕೊಡುತ್ತವೆ. ಅಲ್ಲದೇ ಅವು ಕುತೂಹಲಕಾರಿಯೂ ಎನಿಸುತ್ತವೆ. ಇದು ಕಾದಂಬರಿಯೇ? ಕಥಾಸಂಗ್ರಹವೇ? ಆತ್ಮಕಥನವೇ? ಪ್ರವಾಸ ವೃತ್ತವೇ? ಪ್ರದೇಶ ಪರಿಚಯವೇ? ಎಂದು ಕೇಳುವವರಿಗೆ "CALL IT AS YOU LIKE" ಎಂದೇ ಹೇಳಬೇಕಾಗುತ್ತದೆ. ಒಬ್ಬ ಸೈನಿಕನು ತಾನು ಕಂಡ ತನ್ನ ಸುತ್ತಣ ಪರಿಸ್ಥಿತಿಯನ್ನು ತನಗೆ ಸರಿಕಂಡ ರೀತಿಯಲ್ಲಿ ಹೇಳಿದ ಕತೆಗಳಿಂದ ಓದುಗರಿಗೆ ಅಂದಿನ ಸೈನಿಕ ಜೀವನದ ಪರಿಚಯವಾಗಲಿ ಎಂಬುದೇ ಪ್ರಸ್ತುತ ಗ್ರಂಥದ ಉದ್ದೇಶ. ವಿವರಿಸಿದ ಘಟನೆಗಳನ್ನು ಕತೆಯಂತೆ ಹೇಳಲಾಗಿದ್ದರೂ ಎಲ್ಲವೂ ಕತೆಗಳಾಗಿಲ್ಲ; ಕೆಲವಡೆ ಪ್ರವಾಸ ವೃತ್ತಗಳ ಧಾಟಿಯಲ್ಲಿಯೂ ಅವು ಬಂದಿವೆ. ಪ್ರಸ್ತುತ ಗ್ರಂಥಗಳಲ್ಲಿಯ ಕಥಾ ವಿವರಣೆಗಳು ವಾಸ್ತವ ಘಟನೆಗಳ ನೆಲಗಟ್ಟಿನ ಮೇಲೆ ನಿಂತಿವೆ ಎಂಬ ಆ 'ಕ್ಷ' ಸೈನಿಕನ ಮಾತನ್ನು ನಾನು ನಂಬುತ್ತೇನೆ. ಓದುಗರೂ ನಂಬಲೇಬೇಕೆನ್ನುವ ಹಟವಿಲ್ಲ. ಗ್ರಂಥದ ಉದ್ದೇಶವಿದ್ದುದೇ ಬೇರೆ ಎಂದು ಮೇಲೆಯೇ ಹೇಳಿರುವೆನಲ್ಲ. ಒಬ್ಬ "ಕ್ಷ" ಸೈನಿಕ ತನ್ನ ಸೈನಿಕ ಜೀವನಕ್ಕೆ ಸಂಬಂಧಪಟ್ಟ ಕತೆಗಳನ್ನು ಹೇಳಿದ್ದಾನೆ. ಅದರ ಸತ್ಯಾಸತ್ಯತೆಯು ಆ 'ಕ್ಷ' ಸೈನಿಕನ ಪ್ರಾಮಾಣಿಕತೆಯನ್ನು ಅವಲಂಬಿಸಿದೆಯೇ ವಿನಃ ಓದುಗರ ವಿಶ್ವಾಸವನ್ನಲ್ಲ.

ನನ್ನ ಬಾಳಿನ ದೃಷ್ಟಿ ಹದಗೊಂಡು ವಿಶಾಲ ಮಾನವನ ದರ್ಶನವಾಗಬೇಕೆಂದು ಹಾರಯಿಸುವ ನನ್ನ ಶಿಕ್ಷಕರಾದ ಶ್ರೀ. ಶಂ. ಬಾ ಜೋಶಿಯವರು

ನೆನಹಿಗಳ ವಿಚಾರದಲ್ಲಿ ನಾಲ್ಕು ಮಾತು ಬರೆದುಕೊಟ್ಟು ಉಪಕಾರ ಮಾಡಿದ್ದಾರೆ.

ಮಿಂಚಿನಬಳ್ಳಿಯ ಸಂಪಾದಕರಾದ, ಮಾನ್ಯ ಶ್ರೀ. ಬುರ್ಲಿ ಬಿಂದು ಮಾಧವರು ಈ ಪುಸ್ತಕವನ್ನು ಪ್ರಕಟಿಸಿ ನೆರವಾಗಿದ್ದಾರೆ ಇವರೆಲ್ಲರಿಗೂ ನನ್ನ ಕೃತಜ್ಞತೆಗಳು ಸಲ್ಲಲೇಬೇಕು.

ನನ್ನ ಈ ಮೊದಲಿನ ಕೃತಿಗಳಂತೆ ಇದನ್ನೂ ಓದುಗರು ವಿಶ್ವಾಸದಿಂದ ಬರಮಾಡಿಕೊಳ್ಳುವರೆಂದು ಭರವಸೆ ತಾಳಿದ್ದೇನೆ.

ಪ್ರಜಾರಾಜ್ಯದಿನ ೧೯೫೮
ನಾಡಗೌಡಾ ಬ್ಲಾಕ
ಲಾಯಿನ್ ಬಝಾರ
ಧಾರವಾಡ

**ವೆಂ. ಮು. ಜೋಶಿ**

# ಹರಿಃ ಓಂ



'ಸೈನಿಕಉವಾಚ'ವೆಂಬುದು ೨ನೇ ವರ್ಷದ ಎರಡನೆಯ ಕುಡಿಯು. ಸಕಾಲಕ್ಕೆ ವಾಚಕರ ಕೈ ಸೇರುತ್ತಿರುವದು ಸಂತೋಷದ ಸಂಗತಿಯು,ಪುಸ್ತಕದ ಹೆಸರನ್ನೋದಿದೊಡನೆ, ಆಚ್ಚರಿಯಾಗಬಹುದು. ಇದು ಒಬ್ಬ ಭಾರತೀಯ ಸೈನಿಕನ ಆತ್ಮ ಕಥನದಂತಿದೆ, ಸೈನಿಕ ಜೀವನದ ಚಿತ್ರಗಳನ್ನು ಇದರಲ್ಲಿ ಕಾಣ ಬಹುದು. ಸೈನಿಕನು ಸಂಯಮಿ ಇರದಿದ್ದರೆ, ಸೈನ್ಯದಲ್ಲಿ ಅವನ ಜೀವನವು ಹಾಳಾಗಲು ಎಂತಹ ಸನ್ನಿವೇಶಗಳಿರುತ್ತವೆ ಎಂಬುವನ್ನು ಅರಿಯಬಹುದು. ಇದನ್ನು ಚಿತ್ರಿಸಿದವರು ಈಗಾಗಲೇ ಕಥಾಲೋಕದಲ್ಲಿ ಹೆಸರು ಪಡೆದ ಸ್ವತಃ ಸೈನಿಕ ಜೀವನವನ್ನುಅನುಭೋಗಿಸಿದ ಶ್ರೀ. ವೆಂ. ಮು. ಜೋಶಿಯವರು, ಇವರು ಉದಯೋನ್ಮುಖ ಲೇಖಕರು, ಇಷ್ಟು ಹೇಳಿದರೆ ಸಾಕು. ಅವರು ಮಿಂಚಿನಬಳ್ಳಿಯಲ್ಲಿ ಇದನ್ನು ಪ್ರಕಟಿಸಲು ಅನುಮತಿ ಇತ್ತುದಕ್ಕಾಗಿ ಅವರಿಗೆ ಧನ್ಯವಾದಗಳು.

ಇದಕ್ಕೆ ಮುನ್ನುಡಿಯನ್ನು ಬರೆದುಕೊಟ್ಟ ಶ್ರೀ. ಶಂ. ಬಾ. ಜೋಶಿಯವರಿಗೆ ಅಭಿನಂದನಗಳು.

ಈ ವರ್ಷ ಇಲ್ಲಿಯವರೆಗೆ, ೫೦೦ ಜನ ಚಂದಾದಾರರಾಗಿದ್ದಾರೆ. ೮೦೦ ಜನ ದೊರೆತರೆ, ಬಳ್ಳಿಯು ಸ್ವಾವಲಂಬಿಯಾಗುವದು. ಹೋದ ವರುಷ ೧|| ಸಾವಿರ ರೂಪಾಯಿ ಸಾಲವಾಗಿದೆ. ಆದುದರಿಂದ ನಮ್ಮ ಚಂದಾದಾರರಲ್ಲಿ ಬಿನ್ನಹವಿಷ್ಟೆ! ಪ್ರತಿಯೊಬ್ಬರು ಒಬ್ಬೊಬ್ಬ ಚಂದಾದಾರರನ್ನು ದೊರಕಿಸಿಕೊಟ್ಟರೆ, ಹತ್ತಾರ ಹುಲಕಡ್ಡಿ ಒಬ್ಬನ ತಲೆಹೊರೆ ಎಂಬಂತೆ, ಬಳ್ಳಿಯು ಸ್ವಾವಲಂಬಿ- ಯಾಗಿ,ಕನ್ನಡಿಗರ ಸೇವೆಗೆ ಇಮ್ಮಡಿ ಹುರುಪಿನಿಂದ ಮುಂಬರುವದು. ರಾಷ್ಟ್ರೀಯ ಪುನುರುಜ್ಜೀವನದ ಈ ಕಾರ್ಯದಲ್ಲಿ ಉದಾರರಾದ ಕನ್ನಡಿಗರು ಸಹಾಯ ಮಾಡುವರೆಂಬ ನಂಬಿಗೆಯಿಂದ ಮುಂದಡಿಯಿಡುವ.

ತಾ. ೨೬-೧-೫೮
ಧಾರವಾಡ.

ತಮ್ಮ ಸೇವಕ
ಬುರ್ಲಿ ಬಿಂದುಮಾಧವ




ಮಲಾಯಾದಲ್ಲಿಯ ಸಂಸ್ಥಾನಗಳು

೧. ಜೋಹಾರ. ೨. ನೆಗ್ರಿಸೆಂಬಿಲನ್. ೩. ಸೆಲಂಗೋರ.
೪. ಪೆರಾಕ. ೫. ಕೇಢಾ. ೬. ಕೆಲಂಟನ್. ೭. ಟ್ರೆಂಗನ್ನು
೮. ಪಹಾಂಗ.

ತಪ್ತ ಬಡತನದಲ್ಲಿಯೂ ತಂಪು ವಾತಾವರಣ

ನಿರ್ಮಿಸಿ

ನನ್ನನ್ನು ಸಾಕಿ ಸಲಹಿದ

ನನ್ನ

**ಕೈ. ವಾ. ರಂಗಜ್ಜಿಗೆ**

ಈ ಕೃತಿ ಅರ್ಪಿತ

— ಲೇಖಕ

# ಸೈನಿಕ ಉವಾಚ:

ಗಾಡಿ ನಡೆದಿತ್ತು. ನೂಕು-ನುಗ್ಗಲುಗಳಲ್ಲಿಯೇ ಒಂದು ಇಂಚು ಜಾಗವನ್ನು ಆಕ್ರಮಿಸಿ ಅರ್ಧ ವಿರಾಜಮಾನನಾದೆ. ಹಾಗೆ ಕುಳಿತು, ಒಂದು ಸಲ ಇಡಿಯ ಡಬ್ಬಿಯನ್ನು ನೋಡಿದೆ. ಶ್ರೀರಂಗರ 'ಋತುಸಂಹಾರ' ನೆನಪಾಯಿತು. ನಿಂತವರ ಕೆಲವು ಕಾಲುಗಳು ತಳವನ್ನು ಮುಟ್ಟಿರಲಿಲ್ಲ. ಕುಳಿತವರ ಮುಖಕ್ಕೆ ಗಾಳಿ ಬಡೆಯುತ್ತಿರಲಿಲ್ಲ. ಕೂಸನ್ನು ಬಗಲಲ್ಲಿ ಕರೆದುಕೊಂಡು ನಿಂತ ಮಹಿಳೆಯರ ತಂಡ ಒಂದು ಬದಿಯಲ್ಲಿ. ಆದರಿಂದಾಗಿ ಡಬ್ಬಿಯಲ್ಲಿ ಗದ್ದಲು ಹೆಚ್ಚಾಗಿತ್ತು. ಗಾಡಿಯ ಇಂಜಿನ್ನಿನ ಶಬ್ದ, ಆ ಮಹಿಳೆಯರ ಮಾತುಗಳ ಮುಂದೆ ಏನೂ ಅಲ್ಲ. ಆ ಮಹಿಳೆಯರ ಮಾತುಗಳ ಮೇಲಿಂದ ಅವರು ಯಾವದೋ ಮದುವೆಯ ನಿಬ್ಬಣದವರೆಂದೆನಿಸಿತು. ಎಲ್ಲ ಮಹಿಳೆಯರು ಸಾಲಂಕೃತರಾಗಿದ್ದರು. ಕೆಲವರ ತೋಳುಗಳು ಭಂಗಾರದಿಂದ ಮುಚ್ಚಿ ಹೋಗಿದ್ದವು. ಇಂಥ ಪ್ರವಾಸದಲ್ಲಿ ಈ ಹೆಣ್ಣುಮಕ್ಕಳಿಗೆ ಕಾಂಚನ ಪ್ರದರ್ಶನದ ಹುಚ್ಚೇಕೋ ಎಂದು ವಿಚಾರಿಸಿದೆ. ಗಾಡಿ ತನ್ನದೇ ಗತಿಯಲ್ಲಿ ಬೆಳಗಾಂವಿಯತ್ತ ನಡೆದಿತ್ತು. ಆ ಮಹಿಳೆಯರ ತಂಡವನ್ನು ನೋಡನೋಡುತ್ತ ಆ ಸನ್ನ ಬದಿಯಲ್ಲಿ ಕುಳಿತವರನ್ನೊಂದು ಸಲ ನೋಡಿದೆ. ಒಂದು ಸಲ ನೋಡಿದೆ ಮತ್ತೊಂದು ಸಲ ನೋಡಬೇಕೆನ್ನಿಸಿತು. ಏನೋ ಆ ಮುಖದಲ್ಲಿ ಒಂದು ಪ್ರಜ್ವಲತೆ ಕಾಣಿಸಿತ್ತು. ಒಂದು ಕಾಂತಿ, ಮುಖದಲ್ಲಿ ಉಗ್ರ ಭಾವಕಳೆ. ದಪ್ಪಾದ ಉಂಗರುಗೂದಲು. ಬಿಲ್ಲಿನಾಕಾರದ ಹಿರಿದಾದ ಹುಬ್ಬುಗಳು. ಎರಡೂ ಹುಬ್ಬುಗಳು ಕೂಡಿದ್ದುದರ ಮೂಲಕ ಅದು ಮುಖದ ಕಳೆಯನ್ನೇ ಬದಲು ಮಾಡಿತ್ತು. ಹರವಾದ ಮುಖ, ದಪ್ಪ ತುಟಿಗಳು. ತೇಜಃಪುಂಜ ಕಣ್ಣುಗಳು. ಹಾಗೆಯೇ ಹರವಾದ ಎದೆ. ಮೈಯಲ್ಲಿ ಸಾದಾ ಬಿಳಿಯ ನೆಹರೂ ಶರ್ಟು, ಪಾಯಜಮಾ ಇಷ್ಟೆ. ಮತ್ತಾವ ಆಡಂಬರವೂ ಇಲ್ಲ. ಮತ್ತಾವ ಆಡಂಬರಗಳಿರದಿದ್ದರೂ, ಆ ವ್ಯಕ್ತಿ ವೈಶಿಷ್ಟ್ಯಪೂರ್ಣವಾಗಿ ಕಾಣುತ್ತಿತ್ತು.

ಗಾಡಿ ಆಗಲೇ ಖಾನಾಪೂರ ಸ್ಟೇಶನ್ನಿಗೆ ಅದೇ ಬಂದು ನಿಂತಿತು. ಹೊರಗಿನಿಂದ ಬರುವವರ ಗದ್ದಲ ಕಾಣಬರಲಿಲ್ಲ. ಒಂದು ನಿಶ್ಚಿಂತತೆಯ ನಿಟ್ಟುಸಿರನ್ನು ಬಿಟ್ಟು, ಕೈಯಲ್ಲಿದ್ದ ಕಾದಂಬರಿಯೊಂದರಿಂದ ಗಾಳಿಯನ್ನು ಹಾಕಿ ಕೊಳ್ಳತೊಡಗಿದೆ. ನನ್ನ ದೃಷ್ಟಿ ಮಾತ್ರ ಬದಿಯಲ್ಲಿ ಕುಳಿತ ಆಜಾನುಬಾಹು ವ್ಯಕ್ತಿಯಕಡೆಗಿದ್ದಿತು. ಸ್ವಲ್ಪ ಹೊತ್ತಿನಲ್ಲಿಯೇ ಆ ವ್ಯಕ್ತಿ ಕುಳಿತಲ್ಲಿಂದಲೇ ಬಗ್ಗಿತು. ನಾನು ಕುತುಹಲಿಯಾಗಿ ನೋಡುತ್ತಲಿದ್ದೆ. ಆ ವ್ಯಕ್ತಿ ಹಾಗೆ ಬಗ್ಗಿ ತನ್ನ ಚಪ್ಪಲಿ ಹಾಕಿದ ಕಾಲುಬುಡದಿಂದ ಒಂದು ವಸ್ತುವನ್ನು ಹೊರತೆಗೆದ. ನಾನು ಅಚ್ಚರಿಯಾಗಿ ನೋಡಿದೆ. ಅದು ಭಂಗಾರದ ಬಳೆಯಾಗಿತ್ತು. ನನಗೊಂದೂ ತೋಚದಾಯಿತು. ಪ್ರತಿ ಕ್ಷಣಕ್ಷಣಕ್ಕೆ ನನ್ನ ಕುತೂಹಲ ಹೆಚ್ಚು ತ್ತಿತ್ತು. ಆ ವ್ಯಕ್ತಿ ಆ ಬಳೆಯನ್ನು ಎರಡೂ ಕೈಗಳಿಂದ ಮುಚ್ಚಿ ತಾನು ಕುಳಿತ ಸ್ಥಳದಲ್ಲಿಯೇ ಎದ್ದು ನಿಂತು— ಕೂಗಿಕೊಂಡ.

“ಕೇಳ್ರಿಪೋ, ಕೇಳ್ರಿ. ಯಾರದಾದರೂ ಭಂಗಾರದ ಸಾಮಾನು ಹೋಗೇದೇನು? ಹೆಣ್ಣುಮಕ್ಕಳೆಲ್ಲ ತಮ್ಮ ಮೈಮ್ಯಾಲೆ ಧರಿಸಿಕೊಂಡ ಭಂಗಾರದ ಸಾಮಾನು ಒಮ್ಮೆ ನೋಡಿಕೊಳ್ರಿ. ಖರೆ ಮಾತು ಮಾತ್ರ ಹೇಳಿರಿ. ಯಾರದು ಹೋಗಿದ್ರ ಅವರು ಗುರುತಾ ಹೇಳಲಿ.”

ಡಬ್ಬಿಯಲ್ಲಿ ಒಂದೇ ಕೋಲಾಹಲವೆದ್ದಿತು. ನಿಶ್ಚಿಂತರಾಗಿಯೂ ಕೆಲ ವರು ಕುಳಿತಿದ್ದರು. ಈ ವರೆಗೆ ಜೀವಮಾನದಲ್ಲಿ ಭಂಗಾರ ಕಾಣದವರೇ ಹಾಗೆ ನಿಶ್ಚಿಂತರಾಗಿ ಕುಳಿತದ್ದು. ನಾನೂ ಲೇಖಕನಾದ ತಪ್ಪಿಗೆ ಆ ನಿಶ್ಚಿಂತಕರ ತಂಡದಲ್ಲಿ ಒಬ್ಬನಾಗಿದ್ದೆ. ಆದರೂ ಒಂದು ಕುತೂಹಲ ನನ್ನನ್ನು ಕಾಡು ತ್ತಿದ್ದುದರ ಮೂಲಕ ಕಣ್ಣಾನ್ನರಳಿಸಿಕೊಂಡು ಕುಳಿತಿದ್ದೆ.

ಆ ವ್ಯಕ್ತಿಯ ಆ ಬದಿಯ ಗುಂಪಿನ ಮಹಿಳೆಯರಲ್ಲಿ ಮಾತ್ರ ಅಸವಸ ಕಳವಳ, ಗಡಿಬಿಡಿ, ಗೊಂದಲ ನಡೆದಿತ್ತು. ಒಬ್ಬ ವಯಸ್ಸಾದ ಹೆಣ್ಣುಮಗಳು ಮುಂದೆ ಬಂದು ನಿಂತು “ಅಯ್ಯ ನನ್ನ ಪಾಟ್ಲಿ– ಒಂದಽ ಅದ–ಇದು ನೋಡ್ರಿ” ಎಂದು ಒಂದು ಕೈಯಲ್ಲಿಯ ಪಾಟ್ಲಿಯನ್ನು ತೋರಿಸಿ ಮತ್ತೊಂದು ಬರಿಯಾಗಿ ಇದ್ದ ಕೈ ತೋರಿಸಿದಳು.

ಆ ಆಜಾನುಬಾಹು ವ್ಯಕ್ತಿ ಸಮಾಧಾನದ ನಗು ನಗುತ್ತ ತನ್ನ ಕೈಯ ಲ್ಲಿಯ ಪಾಟ್ಲಿಯನ್ನು ಅವಳ ಕೈಗಿರಿಸಿ ಹೇಳಿದ. “ಸ್ವಲ್ಪ ಎಚ್ಚರಿಕೆಯಿಂದ ಇರ

ಬೇಕರಿ. ನಾ ಕೊಟ್ಟೆ ಅಂತ ಭಲೋ ಆತು. ಇಲ್ಲಾಗಿದ್ದರ! ಅದು ಉಳ್ಳಿ ನನ್ನ ಕಾಲತನಕ ಬಂದಿತ್ತು. ಎಷ್ಟು ತೊಲಿದು ಅದು?"

ಅಂತಃಕರುಣಪೂರ್ವಕವಾಗಿ ಅಶ್ರುಗಳನ್ನು ಉದುರಿಸುತ್ತ ಆ ವಯಸ್ಸಾದ ಮಹಿಳೆ ಹೇಳಿದಳು. "ನಿಮ್ಮುಪಕಾರ ಭಾಳರಿ. ಅವು ನೋಡ್ರಿ ಹನ್ನೆರಡು ತೊಲೀವು ಅವ. ಇಲ್ಲಿತನಕಾ ಭಂಗಾರದ್ದು ಒಂದೂ ವಸ್ತ ಮಾಡಿಸಿದ್ದಿಲ್ಲಾ. ಈಗ ನಾಲ್ಕು ತಿಂಗಳಾತು ನಮ್ಮ ಮನಿಯವರಿಗೆ, ಪೆನ್ಶನ್ ಆತು. ಹುಬ್ಬಳ್ಳಿ ವರ್ಕಶಾಪದಾಗs ಇದ್ದರು. ಪೆನ್ಶನ್ ಆದಕೂಡಲೇ ಫಂಡು ಬಂತು. ಅವರು "ಲಗ್ನ ಆದಾನಸುಟ್ಟು ಪಾಟ್ಲಿ ಪಾಟ್ಲಿ ಅಂತಿದ್ದಿ. ಈಗ ಮಾಡಿಸಿಕೋ" ಅಂತ ಹೇಳಿ ಮಾಡಿಸಿಕೊಟ್ರು. ಅವರು ಖರೇ ಮನಸ್ಸಿನಿಂದಾ ಮಾಡಿಸಿ ಕೊಟ್ರು ಅಂತsನ ಕಳದರೂ ತಿರುಗಿ ಸಿಕ್ಕತರಿ" ಎಂದು ತನ್ನ ಕರುಣಕತೆಯನ್ನು ಕೇಳದೇ ಇದ್ದಾಗಲೂ, ಸ್ತ್ರಿ ಸಹಜ ಸ್ವಭಾವಕ್ಕನುಸರಿಸಿ ತೋಡಿಕೊಂಡಳು.

ಆ ಅಜಾನುಬಾಹು ವ್ಯಕ್ತಿ ಒಂದು ನಿಶ್ಚಿಂತತೆಯ ನಿಟ್ಟುಸಿರನ್ನು ಹಾಕಿ ಪುನಃ ಕುಳಿತುಕೊಂಡಿತು.

ನನಗೆಲ್ಲವೂ ಮೋಜೆನಿಸಿತು. ನಸುಕಿನ ಜಾವದಲ್ಲಿ ಮಿಂಚಿನಂತೆ ಬಿದ್ದು ಮಾಯವಾಗುವ ಸ್ವಪ್ನದಂತೆ ಎಲ್ಲವೂ ನಡೆದುಹೋಯಿತು. ನನ್ನ ಕಣ್ಣು, ಕಿವಿಗಳನ್ನೂ ನಾನೇ ನಂಬದಾದೆ. ಮನಸ್ಸು ತುಂಬಿ ಬಂದು ಆ ಅಜಾನು-ಬಾಹು ವ್ಯಕ್ತಿಯನ್ನು ಮಾತನಾಡಿಸಿದೆ.

"ಕ್ಷಮಿಸಿ, ನನಗೆ ತಮ್ಮ ಗುರುತು ಎಳ್ಳಷ್ಟೂ ಇಲ್ಲ. ಆದರೂ ಇದೀಗ ತಾವು ತೋರಿಸಿದ ಪ್ರಾಮಾಣಿಕತನ, ಔದಾರ್ಯವನ್ನು ನಾನು ಮನವಾರೆ ಮೆಚ್ಚಿದೆ. ಜಗತ್ತಿನಲ್ಲಿ ನಿಮ್ಮಂಥ ಸಜ್ಜನರು ತೀರ ವಿರಳ. ಧನ್ಯವಾದಗಳು."

ಆ ವ್ಯಕ್ತಿ ಒಂದುಸಲ ಬಾಯಿಯಲ್ಲಿಯೇ ಮುಗುಳುನಗೆ ನಕ್ಕು ಹೇಳಿತು.

"ತಾವೇ ನನ್ನನ್ನು ಕ್ಷಮಿಸಿ. ತಾವು ನನ್ನ ವಿಷಯವಾಗಿ ಬಳಸಿದ ಶಬ್ದಗಳು ಬಹಳ ದೊಡ್ಡವು. ನನ್ನನ್ನು ಸಜ್ಜನನೆಂದು ಕರೆದಿರೋ— ಸರಿ ಒಳ್ಳೇ-ದಾಯಿತು. ಅನಾಯಾಸವಾಗಿ ಎತ್ತಿಹಾಕಬಹುದಾದಂಥ ಭಂಗಾರದ ಒಡವೆಯನ್ನು ಮರಳಿ ಅವರದನ್ನವರಿಗೆ ಒಪ್ಪಿಸಿಕೊಟ್ಟ ನನ್ನ ಕೃತಿಯಿಂದ ನನ್ನನ್ನು ಸಜ್ಜನನೆಂದು ಕರೆದಿರಿ. ಆದರೆ ಆ ಒಡವೆ ನನ್ನ ಕೈಗೆ ಸಿಕ್ಕಿದಾಗಲೇ, ಆ

ಭಾವನೆಗಳು ಒಡಮೂಡಿದ್ದರೆ— ನಾನು ಸಜ್ಜನನಾಗುತ್ತಿದ್ದೆ. ಒಂದುಸಲ ಒಂದುಸಲ ಅಲ್ಲ ಸಾವಿರ ಸಲ— ಅದನ್ನು ಜೇಬಿಗೆ ಸೇರಿಸಿಬಿಡಲಾ ಎಂಬ ವಿಚಾರಗಳು ಕಾಡಿಸಿದವು. ಮನವರಿಯದ ಪಾಪವಿಲ್ಲ, ತನು ತಿಳಿಯದ ನೋವಿಲ್ಲವಂತೆ. "

ಹೇಳುವ ಮಾತು ಮುಗಿದಾಕ್ಷಣ ಆ ವ್ಯಕ್ತಿ ಕಿಸೆಯೊಳಗಿಂದ ಪ್ಲೇಯರ್ಸ ನೇವ್ಹಿಕಟ್ ಸಿಗಾರೆಟನ್ನು ತೆಗೆದು— ಸೇದಲು ಪ್ರಾರಂಭಿಸಿತು. ಆ ವ್ಯಕ್ತಿಯ ಬಿಚ್ಚು ಹೃದಯದ ಮಾತು ನನಗೆ ತುಂಬಾ ಸೇರಿದವು. ನಾನು ಆಗಲೇ ೪-೬ ಕತೆಗಳನ್ನು ಬರೆದು ಲೇಖಕನಾಗುವ ಕನಸನ್ನು ಕಾಣುತ್ತಿದ್ದೆ. ಈ ವ್ಯಕ್ತಿಯ ಸುತ್ತ ಒಂದು ಕತೆಯನ್ನೇಕೆ ಬರೆಯಬಾರದು ಎಂದೆನಿಸಿತು. ಆ ವ್ಯಕ್ತಿ ಸೈನಿಕನಾಗಿದ್ದುದು ಸ್ಪಷ್ಟವಾಗಿತ್ತು. ಕನ್ನಡ ಸಾಹಿತ್ಯದಲ್ಲಿ ಸೈನಿಕ ಜೀವನ ಕುರಿತಾದ ಸಾಹಿತ್ಯದ ಕೊರತೆ ಎಷ್ಟು ಎಂಬುದನ್ನು ಬಲ್ಲೆನಾದುದ ರಿಂದ, ಹಾಗೆ ನನ್ನಲ್ಲಿ ವಿಚಾರ ಸುಳಿದುಹೋಯಿತು. ಮುಖ್ಯ ಮಾತನ್ನು ಹೇಗೆ ಪ್ರಾರಂಭಿಸುವದು ಗೊತ್ತಾಗದೇ ಕೇಳಿದೆ.

" ಯಾವ ಊರಿಗೆ ಹೊರಟೀರಿ ? "

" ಶಹಜಾನಪೂರ. "

" ಅದು ಎಲ್ಲಿ ಅದೆ ? "

" ಯು. ಪಿ. ಯೊಳಗ. "

" ಯಾವ ಊರ ಮ್ಯಾಲಿಂದ ಹೋಗೋದು ? "

" ದಿಲ್ಲಿಗೆ ಹೋಗಿ, ಮುಂದ ಬರೇಲಿ-ನಂತರ ಶಹಜಾಹಾನ್‌ಪೂರ. "

" ರಜಾದ ಮ್ಯಾಲ ಬಂದಿದ್ದಿರೇನು ? "

" ಹೌದು. "

" ಈಗ ರಜಾ ಮುಗೀತು ಕಾಣಸ್ತದs? "

" ಇಲ್ಲ ಇನ್ನೂ ೧೫ ದಿನ ಅದ ಬಾಕಿ. "

" ಅಂದ್ರ ಮೊದಲs ಹೊರಟಿರೋ-- ಏನು ಅವರs ನಿಮ್ಮನ್ನು ಕರಸ್ಯಾರ ಏನು ? "

" ಹಂಗೇನೂ ಇಲ್ಲ. ನಾನs ಹೊರಟೇನಿ. ಹೊರಗಿನಕಿಂತಲೂ ಅಲ್ಲಿ ರೋದs ಭಲೋ ಅಂತ ಅನಿಸಿತು. "

" ಅಲ್ಲ ಭಾಳ ದಿವಸಕ್ಕ ಬಂದಿರಿತೀರಿ, ಪುನಃ ಮರುಳಿ ಹೋಗುವಾಗ ಹೆಂಡತಿ-ಮಕ್ಕಳು ನೆನಪು ಭಾಳ ಆಗಿ ತ್ರಾಸ ಆಗತಿರಬೇಕು. "

" ನಾನಿನ್ನೂ ಅವಿವಾಹಿತ, ಆ ಅನುಭವ ನನಗಿಲ್ಲ. "

" ನಿಮ್ಮ ಸೈನಿಕ ಜೀವನ ಪ್ರಾರಂಭವಾಗಿ ಎಷ್ಟು ದಿನಗಳಾದವು ? "

" ೫ ವರುಷ. "

" ಈಗ ತಾನೇ ಯುದ್ಧ ಮುಗಿದುಹೋಯಿತು. "

" ಹೌದು. "

" ನನ್ನದೊಂದು ಪ್ರಾರ್ಥನೆ ಇದೆ. "

" ಏನು ? "

" ನಾನೊಬ್ಬ ಕನ್ನಡ ಕತೆಗಾರ. "

" ಸಂತೋಷ " ಎಂದು ವ್ಯಕ್ತಿ ನನ್ನನ್ನು ನಮಸ್ಕರಿಸಿತು.

" ನಾನು ಸೈನಿಕ ಜೀವನದಮೇಲೆ ಕತೆಗಳನ್ನು ಬರೆಯಬೇಕೆಂದು ಮಾಡಿರುವೆ. ಕೇವಲ ಊಹಿಸಿ ಬರೆಯುವದರಿಂದ ಏನೂ ಪ್ರಯೋಜನವಿಲ್ಲ; ತಾವು ಈಗಾಗಲೇ ೫ ವರುಷ ಆ ಕ್ಷೇತ್ರದಲ್ಲಿ ದುಡಿದಿದ್ದೀರಿ. ತಮ್ಮ ಕೆಲವು ಅನುಭವಗಳನ್ನು ದಯವಿಟ್ಟು ಹೇಳುವಿರಾ ? "

" ನಾನು ಹೇಳಿ ಕೇಳಿ ಸೈನಿಕಾ ಸರ್. ಮೇಲಾಗಿ ಅವಕಾಶವೆಲ್ಲಿ ? ನಾನು ಶಹಜಹಾನಪೂರಕ್ಕೆ ಹೊರಟಿರುವೆ. "

" ತಾವು ೧೫ ದಿನ ಮೊದಲು ಹೊರಟಿರುವಿರಿ. "

" ಹೌದು. "

" ಹಾಗಾದರೆ ಬೆಳಗಾಂವಿಯಲ್ಲಿಯೇ ಇಬ್ಬರೂ ಇಳಿಯುವಾ. ಅಲ್ಲಿಯೇ ನನ್ನ ಅಭ್ಯಾಸದ ಕೋಣೆ ಇದೆ. ೮-೧೦ ದಿನ ಇಬ್ಬರೂ ಇರೋಣವಂತೆ—ನಾನು ಊಟ ಮಾಡುವ ಖಾನಾವಳಿಯಲ್ಲಿಯೇ ತಾವೂ ಊಟ ಮಾಡುವಿರಂತೆ. ತಾವು ತಮ್ಮ ಅನುಭವ ಹೇಳುತ್ತ ಹೋಗಿ, ನಾನು ಅದರ ಉಪಯೋಗ ತೆಗೆದುಕೊಳ್ಳುವೆ. "

ವ್ಯಕ್ತಿ ಒಂದುಸಲ ನಕ್ಕಿತು. ನನ್ನ ಕೈಯನ್ನು ಕುಲುಕಿ ಕೇಳಿತು.

"ಸರ್ ತಮ್ಮ ಹೆಸರನ್ನು ಕೇಳಬಹುದೇ ?"

"ಓಹೋ ಅವಶ್ಯವಾಗಿ. ನನ್ನ ಹೆಸರು ವೆಂ. ಮು. ಜೋಶಿ. ತಮ್ಮ ಹೆಸರೇನು ?"

"ನನ್ನ ಅಡ್ಡ ಹೆಸರೂ ಅದೇ– ಹೆಸರು ಬೇರೆ. ಗಿರಿಪತಿ ಜೋಶಿ."

"ಅಂತೂ ಹೆಸರಲ್ಲಾದರೂ ಇಬ್ಬರಲ್ಲಿ ಸಾಮ್ಯವಿದೆ."

ಇಬ್ಬರೂ ಕೈಯನ್ನು ಕುಲುಕಿ ನಕ್ಕೆವು. ಆಗಲೇ ಬೆಳಗಾಂವಿ ಸ್ಟೇಶನ್ನಿನಲ್ಲಿ ಗಾಡಿ ಬಂದು ನಿಂತಿತ್ತು.

# ನಾಗರಿಕ ಜೀವನದಿಂದ ಸೈನಿಕ ಜೀವನ

೧

ಆದೇ ಎರಡನೇಯ ಮಹಾಯುದ್ಧ ಪ್ರಾರಂಭವಾಗಿ ಹೋಗಿತ್ತು. ಜಗತ್ತಿನಲ್ಲಿಯೇ ಹಾಹಾಕಾರವೆದ್ದಿತ್ತು. ಭಾರತದಲ್ಲಿಯ ಪರಿಸ್ಥಿತಿಯಂತೂ ಹದಗೆಟ್ಟು ಹೋಗಿತ್ತು. ೧೯೪೨ ರ ಚಳವಳಿ ಬಲು ಜೋರಿನಿಂದ ನಡೆದಿತ್ತು. ಆ ಚಳವಳಿಯಿಂದ ಉತ್ಸಾಹಿತನಾಗಿ ಗುಪ್ತ ಚಟುವಟಿಕೆಗಳಲ್ಲಿ ಭಾಗವಹಿಸ ತೊಡಗಿದ್ದೆ. ಒಂದು ಸಲ ಪೋಲಿಸ ಸ್ಟೇಶನ್ನಿನಲ್ಲಿ ಹೋಗಿ ಕುಳಿತುಕೊಂಡು ಬಂದೆ. ಬಂದೆ ಎನ್ನುವದಕ್ಕಿಂತಲೂ ಹೊರದಬ್ಬಿದರು. "ಇನ್ನೂ ಸಣ್ಣವ ಇದ್ದೀ ಹೋಗು. ಇನ್ನೊಮ್ಮೆ ಹೀಂಗ ಮಾಡಿದರಽ ನೋಡು ಹಲ್ಲಽ ಮುರೀತಿನಿ." ಎಂದು ಝುಬರಿಸಿ ಫೌಜದಾರ ಸಾಹೇಬರು ನನ್ನನ್ನು ಹೊರನೂಕಿದರು. ಮನೆಗೆ ಬಂದೆ. ನನ್ನನ್ನು ಪೋಲೀಸ ಸ್ಟೇಶನ್ನಿಗೆ ಕರೆದೊಯ್ದಿದ್ದ ಸುದ್ದಿ ನನ್ನ ತಂದೆಯವರಿಗೆ ತಿಳಿದಿತ್ತು. ನನಗೆ ಮನೆಯಲ್ಲಿ ಮೊದಲೇ ಒಪ್ಪತ್ತು ಊಟ ಸಿಗುತ್ತಿತ್ತು. ದೇಶದಲ್ಲಿ ಭುಗಿಲ್ಲೆಂದು ಎದ್ದ ಸ್ವಾತಂತ್ರ್ಯ ಆಂದೋಲನದ ದಿನನಿತ್ಯದ ಸುದ್ದಿಗಳಿಂದ ನನ್ನ ರಕ್ತ ಸಳಸಳ ಕುದಿಯುತ್ತಿತ್ತು. ನನಗೆ ಆಗ ಪ್ರಜಾಪ್ರಭುತ್ವದ ಅರ್ಥ ಪಠ್ಯ ಪುಸ್ತಕಗಳ ಮೂಲಕ ತಿಳಿದಿದ್ದರೂ ಈ ಆಂದೋಲನದ ಗೊತ್ತು ಗುರಿಗಳು ಏನು ಎಂಬುದು ತಿಳಿದಿರಲಿಲ್ಲ. ತಿಳಿಯುವ ಗೋಜಿಗೂ ಹೋಗಲಿಲ್ಲ. ನನಗಾಗ ಗೊತ್ತಿದ್ದುದು ಒಂದೇ. ಬ್ರಿಟಿಶರು ಪರಕೀಯರು. ಅವರು ನಮ್ಮ ದೇಶದವರಲ್ಲ. ನಮ್ಮನ್ನು ಆಳುತ್ತಿದ್ದಾರೆ, ನಮ್ಮನ್ನು ಗುಲಾಮರಂತೆ ನಡೆಸಿಕೊಳ್ಳುತ್ತಿದ್ದಾರೆ. ಇವರನ್ನು ಹೊರದಬ್ಬುವದೊಂದೇ ಗುರಿ ಗೊತ್ತಿತ್ತು.

ಆದರೆ ಆ ಉತ್ಸಾಹ ಕೊನೆಯವರೆಗೆ ಉಳಿದರೂ, ನನ್ನ ಸುತ್ತಣ ಪರಿಸ್ಥಿತಿ ಅದಕ್ಕೆ ಪೂರಕವಾಗಿರಲಿಲ್ಲ. ನನ್ನ ತಂದೆ ಕನ್ನಡ ಶಾಲೆಯ ಮಾಸ್ತರರು. ಅವರಿಗೆ ಪ್ರತಿತಿಂಗಳು ೪೫ ರೂಪಾಯಿ ಸಂಬಳ ರೂಪದಲ್ಲಿ ಸಲ್ಲುತ್ತಿತ್ತು. ಹುಚ್ಚು ತಾಯಿ, ಮುದುಕಿ ಅಜ್ಜಿ, ಐವರು ಸಾಲೆ ಕಲಿಯುವ ಗಂಡುಮಕ್ಕಳು, ಲಗ್ನದ ವಯಸ್ಸಿಗೆ ಬಂದ ಒಬ್ಬ ಹೆಣ್ಣುಮಗಳು. ಈ ಸಂಸಾರ ಕೇವಲ ೪೫ ರೂಪಾಯಿಯಲ್ಲಿ ಸಾಗಿಸಬೇಕು. ಆದಕ್ಕಾಗಿ ನನಗೆ ಸಿಗುತ್ತಿದ್ದುದು ಒಂದೇ ಊಟ. ಅದೂ ನನ್ನ ಅಜ್ಜಿಯ ಕೃಪೆಯ ಮೂಲಕ. ಆದರೆ ಪೋಲೀಸ

ಸ್ಟೇಶನ್ನಿನಿಂದ ನಾನು ಮರಳಿ ಮನೆಗೆ ಬಂದಾಗ ಮನೆಯಲ್ಲಿ ಒಂದು ದೊಡ್ಡ ಅವಾಂತರವೇ ನಡೆದಿತ್ತು. ತಂದೆಯುವರು ನನ್ನನ್ನು ಸ್ವಾಗತಿಸಿದರು.

"ಬರ್ರಿ ಕುಲದೀಪಕರೇ, ಒಳಗೆ ಬನ್ನಿ."

ತಂದೆ ನನ್ನನ್ನು ಬಹುವಚನದಿಂದ ಮಾತಾಡಿಸಿದ್ದನ್ನು ಕಂಡು ನನಗೆ ನಾಚಿಕೆಯಾಗಿತ್ತು- ಹೆದರಿಕೆಯಾಗಲಿಲ್ಲ. ದಡ್ಡು ಬಿದ್ದಿತ್ತು. ನಾನು ಸುಮ್ಮನೆ ಬಾಗಿಲದ ಚೌಕಟ್ಟನ್ನು ಹಿಡಿದುಕೊಂಡೇ ನಿಂತೆನು.

"ಒಳಗ ಬಾ ಹುಚ್ಚ ಸೂಳೀ ಮಗನ ಽ" ತಂದೆ ಗರ್ಜಿಸಿದರು. ಏನೂ ಘಟಿಸಲಿಲ್ಲವೆಂಬಂತೆ ನಾನು ಒಳನಡೆದೆ. ತಂದೆಯುವರು ಕೈಯಲ್ಲಿಯ ಬೆತ್ತದ ಛಡಿಯಿಂದ ಮೂರು ನಾಲ್ಕು ಸಲ ಬಾರಿಸಿದರು. ನನ್ನ ಕಣ್ಣಲ್ಲಿ ನೀರೂರಲಿಲ್ಲ. ಆಜನ್ಮ ಪ್ರಾಥಮಿಕ ಶಾಲೆಯ ಶಿಕ್ಷಕರಾಗಿ ದುಡಿಯುತ್ತಿದ್ದ ನನ್ನ ತಂದೆಯುವರಿಗೆ ಮಾತು ಮಾತಿಗೆ ಛಡಿಯಿಂದ ಹೊಡೆಯುವದು ರೂಢಿಯೇ ಆಗಿತ್ತು. ಕನ್ನಡ ಏಳು ತರಗತಿಯ ವರೆಗೂ ಅವರ ಕೈಯಲ್ಲಿಯೇ ಕಲಿತ ನನಗೆ ಅದು ಹೊಸ ಅನುಭವವಾಗಿರಲಿಲ್ಲ. ಕನ್ನಡ ಸಾಲೆಯಲ್ಲಿ ಕಲಿಯುತ್ತಿದ್ದಾಗ ಇದರ ೮-೧೦ ಪಟ್ಟು ಹೊಡೆತ ತಿಂದ ನನಗೆ ಇದು ಎಷ್ಟರ ಮಾತು. ಅಜ್ಜಿ ಬಂದು ಬಿಡಿಸಿದಳು. ತಂದೆಯುವರು ಕೋಪಾವಿಷ್ಟರಾಗಿ ಕೂಗಾಡತೊಡಗಿದರು.

"ಈ ಭಾಮುಟ್ಯಾ ಸತ್ತರ ನನಗೇನೂ ಕೆಡಕು ಅನಿಸೂದಿಲ್ಲ. ಆದರ ಇಂವಾ ಮಾಡೂ ಭಾನಗಡೀ ಇಂದ, ನನ್ನ ನೌಕರಿ ಹೋಗೂ ಅಂಜಿಕಿ ಅದ. ಅದೇನೂ ಇಲ್ಲ. ಇವತ್ತಿನಿಂದ ನೀನು ಹೊರಗಽ ಹೋಗು, ಮನ್ಯಾಗ ನಿಲ್ಲೂದಽ ಬ್ಯಾಡ. ಯಾವದಾವರೂ ಹಾಳು ಭಾಂವಿ ಬೀಳು. ಆದರ ಮಾರೀ ತೋರಿಸ ಬ್ಯಾಡ. ಸಾಯು—ಸಾಯು—ಸೂಳೀಮಗನ ಽ"

ನಾನು ಹಿರಿಯ ಮಗ. ಸತ್ತರೆ ನಾನು ಸಾಯಲೇಬೇಕು. ಮನೆಯ ಮೇಲೆ ಹಾಕಿದ ಛಪ್ಪರಕ್ಕನೇ ತಾನೇ ಮಳೆ, ಬಿಸಿಲು, ಚಳಿಗಳ ಬಡೆತ. ಅದರ ಕೆಳಗಿನವರು ಸುರಕ್ಷಿತರಾಗಿರುವದು ಸಹಜ. ನನ್ನ ಬೆನ್ನಿನ ತಮ್ಮ— ನನಗಿಂತಲೂ ಒಂದು ವರುಷಕ್ಕೆ ಸಣ್ಣವ. ಆತ ನನ್ನ ತಂದೆಯ ಪ್ರೀತಿಪಾತ್ರ ಮಗು.

ನಾನು ಇನ್ನೂ ಹಾಗೆಯೇ ನಿಂತುಕೊಂಡಿದ್ದೆ. ತಂದೆಯುವರು ಹತ್ತಿರ ಬಂದು ಕುತಿಗೆಗೆ ಕೈ ಹಾಕಿ ಹೊರದಬ್ಬಿದರು. ಆ ಧಡಕಿಗೆ ನಾನು ನೆಲದ

ಮೇಲೆ ಬಿದ್ದಿದ್ದೆ. ೩ ತಿಂಗಳಿಂದಲೂ ನನಗೊಬ್ಬನಿಗೆ ಮನೆಯಲ್ಲಿ ಒಪ್ಪತ್ತು ಊಟದ ಕರಾರು ಮಾಡಲಾಗಿತ್ತು. ಆ ಅರೆಹೊಟ್ಟೆಯ ಮೂಲಕ ನನಗೆ ಬೇಗನೇ ಮೇಲಕ್ಕೇಳಲಾಗಲಿಲ್ಲ, ಪುನಃ ಮನೆಯತ್ತ ಹೊರಳಿ ನೋಡಲಿಲ್ಲ. ಹೇಗೋ ಮಾಡಿ ಬೀದಿಗೆ ಬಂದೆ— ನಡೆಯತೊಡಗಿದೆ. ನನ್ನಂತಹನಿಗೆ ಊಟ ಸಿಗುವದಾದರೂ ಎಲ್ಲಿ ?

ಒಂದು ಮನಸ್ಸು ಹೇಳತೊಡಗಿತ್ತು "ಎರಡೇ ಎರಡು ಕಡೆ- ಒಂದು ಜೇಲಿನಲ್ಲಿ— ಇನ್ನೊಂದು ಸೈನ್ಯಖಾತೆಯಲ್ಲಿ"

"ನಿಮಗೆ ನೌಕರಿ ಬೇಕೆ ? ಹಾಗಾದರೆ ಇಲ್ಲಿ ಬನ್ನಿ ತಿಂಗಳಿಗೆ ೧೫ ರೂಪಾಯಿ, ಊಟ, ಬಟ್ಟೆ ಪುಕ್ಕಟ."

ಚೌಕಿನಲ್ಲಿ ತೂಗು ಹಾಕಿದ ಬೋರ್ಡನ್ನು ನೋಡಿದೆ. ಜೇಲಿನಲ್ಲಂತೂ ಕರೆದುಕೊಳ್ಳಲಿಲ್ಲ. ಇನ್ನುಳಿದದ್ದೊಂದೇ ಮಾರ್ಗ. ನನ್ನ ಕಾಲುಗಳು ರಿಕ್ರೂಟಿಂಗ ಆಫೀಸಿನತ್ತ ಹೊರಳಿದವು.

* * * *

ಚರ್ಚಿಲ್ ಸಾಹೇಬರು ಒಂದು ಹೇಳಿಕೆಯನ್ನಿತ್ತಿದ್ದರು. "ಭಾರತದಲ್ಲಿ ಕಾಂಗ್ರೆಸ್ ಸೈನ್ಯ ಭರತಿಯನ್ನು ತೀವ್ರ ವಿರೋಧಿಸಿದರೂ ಭಾರತೀಯರು ಸ್ವಸಂತೋಷದಿಂದ ಸಾಕಷ್ಟು ಸಂಖ್ಯೆಯಲ್ಲಿ ಸೈನಿಕ ಖಾತೆಯಲ್ಲಿ ಭರತಿಯಾಗುತ್ತಿದ್ದಾರೆ, ಬ್ರಿಟಿಶ ಸರಕಾರದ ಮೇಲಿದ್ದ ಅವರ ನಿಷ್ಠೆ ಇದರಮೇಲಿಂದ ವ್ಯಕ್ತವಾಗುತ್ತಿದೆ.

ಸಾಕಷ್ಟು ಸಂಖ್ಯೆಯಲ್ಲಿ ಜನ ಸೈನ್ಯ ಭರತಿಗೆ ಬರುತ್ತಿದ್ದಾರೆನ್ನೋ ನಿಜ— ಆದರೆ ಬ್ರಿಟಿಶ್ ಸರಕಾರದ ವಿಷಯವಾಗಿ ಇದ್ದ ನಿಷ್ಠೆಯಿಂದಲ್ಲ.

ಎಲ್ಲ ಬಾಗಿಲುಗಳು ಮುಚ್ಚಿಹೋದ— ಅನಾಥ ಹೆಣ್ಣುಮಕ್ಕಳು ಅಸಹಾಯ ಸ್ಥಿತಿಯಲ್ಲಿ— ಸೂಳೆಯರಾದಂತೆ ಇತ್ತು ಆ ಸೈನಿಕರ ಬಾಳು.

## ನಾನು ಸೈನಿಕನಾದೆ

ರಿಕ್ರೂಟಿಂಗ ಆಫೀಸಿನಲ್ಲಿ ಒಳ ಹೋದದ್ದೇ ತಡ— ೨೪ ತಾಸಿನಲ್ಲಿ ರಂಗರೂಟ (Recruit) ನಾಗಿ ಹೊರಬಿದ್ದು ರೇಲ್ವೆ ಪಾಸನ್ನು ತೆಗೆದುಕೊಂಡು

ರೈಲಿನಲ್ಲಿ ಕುಳಿತುಬಿಟ್ಟೆ. ೩೬ ತಾಸುಗಳ ನಂತರ ನಿಶ್ಚಿತ ಸ್ಥಳವಾದ ಜಬ್ಬಲಪೂರಕ್ಕೆ ಬಂದೆ. I. A. O. C. (Indian Army Ordinance Corps) Training Centre ದಲ್ಲಿ ಪ್ರವೇಶಿಸಿದೆ. ಮೊದ ಮೊದಲಿನ ಒಂದೆರಡು ದಿನ ಅಲ್ಲಿಯ ಭೀಕರ–ಕ್ರೌರ್ಯ–ನಿರ್ದಯ ವಾತಾವರಣ ದಿಂದ ಅಂಜಿಹೋಗಿದ್ದೆ. ಎಲ್ಲವೂ ವಿಚಿತ್ರ– ನಾಗರಿಕ ಜೀವನದಿಂದ ತೀರ ಭಿನ್ನ– ಭಾಷೆ ಬೇರೆ– ಜನ ಬೇರೆ– ನಮ್ಮ ಮೇಲಿನವರು ನಮ್ಮನ್ನು ನಡೆಸಿ ಕೊಳ್ಳುವ ಕ್ರೂರ ರೀತಿ–ನೀತಿ–ಎಲ್ಲವೂ ಮನಸ್ಸನ್ನು ಅಂಜಿಸತೊಡಗಿದವು. ಆದರೆ ಬೇರೆ ಗತಿ ? ಇದೇ ದುರ್ಗತಿ. ಅಭ್ಯಾಸವಿಲ್ಲದ ಹೆಣ್ಣುಮಗಳು ಸೂಳೆ ಗೇರಿಯಲ್ಲಿ ಮೊದಲ ದಿನ ಕಳೆದಂತೆ ಭಯಾನಕವಾಗಿತ್ತು ಪರಿಸ್ಥಿತಿ.

ಬರಬರುತ್ತ ಅಭ್ಯಾಸವಾಯಿತು. ಮೊದಲು ತಿಂಗಳ ಸಂಬಳ ದೊರೆ ಯಿತು. ೬೫ ರೂಪಾಯಿ ಆದರಲ್ಲಿ ೫ ರೂಪಾಯಿಗಳನ್ನಿರಿಸಿ ೬೦ ರೂಪಾಯಿ ಗಳನ್ನು ಮನೆಗೆ—ತಂದೆಗೆ ಕಳಿಸಿದೆ. ೬ ತಿಂಗಳಲ್ಲಿ–ಪಕ್ಕಾ ಸೈನಿಕನಾದೆ. ಸೈನಿಕ ಪರೀಕ್ಷೆಯಲ್ಲಿ ತೇರ್ಗಡೆಯಾದೆ. ಅಂದು ಕೈಯಲ್ಲಿ ‘ ಗೀತೆ ’ಯನ್ನು ಹಿಡಿದು ಪ್ರತಿಜ್ಞೆ ಮಾಡಿದೆ.

“ ನಾನು ಮನಃಪೂರ್ವಕವಾಗಿ ದೇವರ ಹೆಸರಿನಲ್ಲಿ ಪ್ರತಿಜ್ಞೆ ಮಾಡುವ ದೇನಂದ್ರೆ–ನಾನು ನಮ್ಮ ಚಕ್ರವರ್ತಿಗಳಿಗೆ ನಿಷ್ಠನಾಗಿ ಯುದ್ಧದಲ್ಲಿ ಹೋರಾ ಡುವೆ, ಜಗತ್ತಿನ ಯಾವದೇ ಮೂಲೆಗೆ– ಜಲ, ನೆಲ, ಆಕಾಶ ಮಾರ್ಗವಾಗಿ– ಚಕ್ರವರ್ತಿಗಳ ಸೇವೆ ಮಾಡುವದಕ್ಕೋಸ್ಕರ ಹೋಗಲು ಸಿದ್ಧನಿರುವೆ. ”

ಹಾಗೆ ಪ್ರತಿಜ್ಞೆ ಮಾಡುತ್ತಿರುವಂತೆ ನಗು ಬಂದಿತು. ಆದರೂ ನಗು ವಂತಿಲ್ಲ. (Oath taking parade) ಪ್ರತಿಜ್ಞೆ ಸ್ವೀಕರಿಸುವ ಪರೇಡ ನಡೆದಿತ್ತು. ಸೈನಿಕರಲ್ಲಿ ಜೀವವಿರಲಿ, ಇಲ್ಲದಿರಲಿ ಶಿಸ್ತು ಮಾತ್ರ ಇರಬೇಕು. ಪ್ರತಿಜ್ಞೆ ವಿಧಿ ಸಮಾಪ್ತಿಯಾಯಿತು. ಮಿಲ್ಟ್ರಿ ಟ್ರೇನಿಂಗಿನಲ್ಲಿ ವಾರ ವಾರವೂ ಪರೀಕ್ಷೆಯಾಗುತ್ತಿರುತ್ತದೆ. ಒಂದು ವಾರದ ಪರೀಕ್ಷೆಯಲ್ಲಿ ನಾಪಾಸಾದರೆ ಮತ್ತೆ ಅಲ್ಲಿಯೇ ಆ ವಾರದ ಅಭ್ಯಾಸದಲ್ಲಿಯೇ ಕೊಳೆಯಬೇಕು. ನಾನು ಯಾವ ವಾರದಲ್ಲೂ ನಾಪಾಸಾಗಲಿಲ್ಲ.–- ಆದಕ್ಕೆ ಬೇಗನೇ ‘ ನಾಯಿಕ ’ ಹುದ್ದೆಗೇರಿದೆ. ಟ್ರೇನಿಂಗ ಅವಧಿಯಲ್ಲಿ ನಡೆದ ಕೆಲ ಘಟನೆಗಳನ್ನು ಹೇಳಬೇಕೆನ್ನಿಸುತ್ತಿದೆ.

ಬೆಳಗಾಂವಿಯಿಂದ ಜಬಲಪೂರಿಗೆ ಬಂದನಂತರ— ಆ ಸೈನಿಕ ಶಿಕ್ಷಣ ಕೇಂದ್ರವಲ್ಲಿ ಕನ್ನಡ ಮಾತನಾಡುವವರು ಮೊದಮೊದಲು ಯಾರೂ ಸಿಕ್ಕಲಿಲ್ಲ. ನನ್ನಂತೆ— ನನ್ನ ಸಮಯಕ್ಕೇ ಭರತಿಯಾಗಿ ಬಂದವರಲ್ಲಿ ಕೆಲವರು ಪಂಜಾಬಿಗಳು, ಮದ್ರಾಸಿ ಮತ್ತು ಮರಾಠಿಗರು ಇದ್ದರು. ಅಲ್ಲಿಯ ಹವಾಲ್ದಾರ್ ನಮ್ಮನ್ನೆಲ್ಲ ನಾವು ಬಂದಿರುವ ಪ್ರಾಂತಗಳ ಮೇಲಿಂದ ವಿಂಗಡಿಸಿ ನೋಡಿದ. ನನ್ನನ್ನು ಕೇಳಿದ— ನಾನು "ಮುಂಬಯಿ ಪ್ರಾಂತದಿಂದ" ಎಂದು ಉತ್ತರಿಸಿದೆ. "ಸರಿ ಹಾಗಾದರೆ ನೀನು ಮರಾಠಾ" ಎಂದು ವಿಂಗಡಿಸಿದ. ಮುಂಬಯಿ ಪ್ರಾಂತದಿಂದ ಯಾರೇ ಬಂದಿರಲಿ ಅವರೆಲ್ಲರನ್ನೂ 'ಮರಾಠಾ' ಎಂದೇ ತಿಳಿಯುತ್ತಿದ್ದರು. ಒಂದುದಿನ ನನ್ನ ಜನಿವಾರ ಕಂಡು ಅದೇ ಹವಾಲ್ದಾರ ಕೇಳಿದ "ಕ್ಯಾ ತುಮ್ ಪಂಡಿತ ಹೈ?" ಹೌದು ಎಂದೆ. ಆತ ಅದಕ್ಕೆ "ಅಚ್ಛಾ ತೋ ತುಮ್ ಮರಾಠಾ ಪಂಡಿತ ಹೈ." ಎಂದು ಹೇಳಿ, ಅಂದಿನಿಂದ ನನ್ನ ಜತೆಯಲ್ಲಿ ಕೊಂಚ ಸೌಮ್ಯ ರೀತಿಯಲ್ಲಿ ನಡೆದುಕೊಳ್ಳಲಾರಂಭಿಸಿದ.

## ರಘು ದೇಶಪಾಂಡೆ— ಕಾಂಗ್ರೆಸಿನ ಗುಪ್ತಚಾರ

ನಮ್ಮ ಜತೆಯಲ್ಲಿಯೇ ಶಿಕ್ಷಣಕ್ಕಾರಂಭಿಸಿದವರಲ್ಲಿ ನಾಗಪೂರದಿಂದ ಬಂದ ಆಜಾನುಬಾಹು ವ್ಯಕ್ತಿಯೊಬ್ಬನಿದ್ದ. ಆತನ ಹೆಸರು ರಘುನಾಥ ದೇಶಪಾಂಡೆ. ಮರಾಠಿಯಷ್ಟೇ ಹಿಂದಿಯನ್ನೂ ಚೆನ್ನಾಗಿ ಮಾತಾಡುತ್ತಲಿದ್ದ. ಯಾವಾಗಲೂ ಗಂಭೀರನಾಗಿಯೇ ಇರುತ್ತಿದ್ದ. ಯಾರಿಗೂ ಆತ ಹೆದರುತ್ತಿದ್ದಿಲ್ಲ! ಯಾರಿಗೂ ಮಣಿಯುತ್ತಿದ್ದಿಲ್ಲ. ಒಂದುದಿನ ಇದ್ದಕಿದ್ದಂತೆ ಆತನನ್ನು 'ಅರೆಸ್ಟ' ಮಾಡಲಾಯಿತು. ನಮಗೆಲ್ಲರಿಗೂ ಆಶ್ಚರ್ಯವಾಯಿತು. ಆದರೆ ಸಂಜೆಯಮುಂದೆ ರೋಲ್ ಕಾಲ್ ಪರೇಡಿನಲ್ಲಿ— ದೇಶಪಾಂಡೆನನ್ನು ತರಲಾಯಿತು. ಎಲ್ಲರ ಮುಂದೊಮ್ಮೆ ಆತನನ್ನು ಕರೆದುಕೊಂಡು ತೋರಿಸಿ, ನಂತರ ಹವಾಲ್ದಾರ ಮೇಜರ ವಿಷಯವನ್ನು ತಿಳಿಸಿದ.

"ಈ ದೇಶಪಾಂಡೆ ನಾಗಪೂರ ಕಾಂಗ್ರೆಸಿನ ಮೆಂಬರನಿದ್ದಾನೆ. ಎರಡು ಸಲ ಜೇಲಿಗೆ ಹೋಗಿ ಬಂದಿರುವ. ಈಗ ೧೯೪೨ರ ಚಳುವಳಿಯಲ್ಲಿಯೂ ಭಾಗ ವಹಿಸಿ— ಸೈನ್ಯಖಾತೆಯ ಸುದ್ದಿ ಸಂಗ್ರಹಿಸಲು ಗುಪ್ತಚಾರನಾಗಿ ಬಂದಿರುವ. ಹೀಗೆ ಇದರಂತೆ ಮುಂದೆ ಯಾರಾದರೂ ಮಾಡೀರಿ, ಎಚ್ಚರಿಕೆ."

ದೇಶಪಾಂಡೆನ ಮುಖದಮೇಲೆ ಯಾವದೇ ತರದ ವ್ಯತ್ಯಾಸವಾಗಿರಲಿಲ್ಲ. ಎಂದಿನಂತೆ ಆತ ಗಂಭೀರನಾಗಿಯೇ ಇದ್ದ.

ಆತನನ್ನು ಮರುದಿನ ಮಿಲ್ಟ್ರಿ ಪೊಲೀಸ ಎಸ್ಕಾರ್ಟಿನಲ್ಲಿ ನಾಗಪೂರಿಗೆ ಕಳಿಸಲಾಯಿತು. ಹೋಗುವದಿನ ಭೇಟಿಯಾಗುವದಕ್ಕೆ ಹೋಗಿದ್ದೆ.

" ನಮುಸ್ಕಾರ ದೇಶಪಾಂಡೆ— ಜಾವೂನ ಯಾ."

(ನಮುಸ್ಕಾರ ದೇಶಪಾಂಡೆ ಹೋಗಿ ಬರ್ರಿ.)

" ಹೋಗಿ ಬರ್ರಿ ಅನಬ್ಯಾಡರಿ— ಹೋಗ್ರಿ ಅಂತ ಹೇಳ್ರಿ" ನಗುನಗುತ್ತ ಮೇಲಿನಂತೆ ಉತ್ತರಿಸಿ— ಟ್ರಕ್ಕನೇರಿದರು.

ಟ್ರಕ್ಕು ಕಣ್ಮರೆಯಾಗುವವರೆಗೂ ನಿಂತಿದ್ದೆ.

ಏನೂ ತಿಳಿಯುಲಿಲ್ಲ.

## "ಮದ್ರಾಸಿಗಳ ಗೊಂದಲ"

ಒಂದು ದಿನ ಸಂಜೆ— ಊಟಕ್ಕಾಗಿ ಮೆಸ್ಸಿನಲ್ಲಿ ಕುಳಿತಾಗ ಒಮ್ಮೆಲೆ ದಂಗೆ ಎದ್ದಿತು. ಸಾಮಾನ್ಯವಾಗಿ ಸೈನಿಕ ಶಿಕ್ಷಣಕೇಂದ್ರದಲ್ಲಿ ಎರಡು ಪಂಗಡ ಗಳಾಗಿರುತ್ತವೆ. ಒಂದು ಕಲಿಸುವ ಸೈನಿಕರದು, ಮತ್ತೊಂದು ಕಲಿಯುತ್ತಿರುವ ಸೈನಿಕರದು. ಅದೇ ನಾಗರಿಕ ಜೀವನದಿಂದ ಸೈನಿಕ ಜೀವನಕ್ಕೆ ಕಾಲಿಡುತ್ತಿರು ವದರಿಂದ, ಅವರಿಗೆ ಅಲ್ಲಿಯ ವಾತಾವರಣ ತೀರ ವಿಚಿತ್ರವಾಗಿ ಕಾಣುವದು ಸಹಜ. ಆದೇ ಕಲಿಸುವ ಸೈನಿಕರು- ಆ ಜೀವನದಲ್ಲಿ ತರಬೇತಿ ಹೊಂದಿದವ ರಿರುತ್ತಾರೆ. ಅವರ ರಕ್ತದಲ್ಲಿ ಆಗಲೇ ಸೈನಿಕ ಜೀವನದ ಅಂಶ ಒಂದಾಗಿ ಬಿಟ್ಟಿರುತ್ತದೆ. ಅವರ ನಡೆ, ನುಡಿ ಎಲ್ಲವೂ ಹೊಸದಾಗಿ ಬಂದ ರಂಗರೂಟರು ಗಳಿಗೆ ಕ್ರೂರವಾಗಿ ಕಾಣಿಸುತ್ತದೆ. ಅದು ಅವರ ತಪ್ಪೂ ಅಲ್ಲ— ಅವರಿಗೆ ಕಲಿಸುವ ಸೈನಿಕರ ತಪ್ಪೂ ಅಲ್ಲ. ಪ್ರಸಿದ್ಧ ತತ್ವಜ್ಞಾನಿ ರಾಧಾಕೃಷ್ಣನ್ ಹೇಳಿದ್ದಾರೆ "—If an animal is taken out of its environment and thrust into another, it is bound to feel restless and uneasy till it adjusts itself to the new situation." ಹೀಗಾಗುವದು ಸ್ವಾಭಾವಿಕ. ಆನೆಗಳ ಬೇಟೆಯಾಡುವ

ಬಗೆ ಗೊತ್ತಿದ್ದವರಿಗೆ ಈ ಮಾತಿನ ಯತಾರ್ಥತೆ ಬೇಗ ತಿಳಿಯುವದು. ಬಲೆ ಹಾಕಿ ತಗ್ಗಿನಲ್ಲಿ ಆನೆಗಳನ್ನು ಕೆಡವಿದ ನಂತರ, ೨-೩ ದಿನ ಅವುಗಳನ್ನು ಉಪವಾಸ ಕೆಡುವುತ್ತಾರೆ. ಅವು ನಿರ್ವಿಣ್ಣವಾದ ನಂತರ ಪಳಗಿದ ಆನೆಗಳಿಂದ ಅವುಗಳನ್ನು ಹಾದಿಗೆ ತರುತ್ತಾರೆ. ಸ್ವಲ್ಪ ಹೆಚ್ಚು ಕಡಿಮೆ ಸೈನಿಕ ಶಿಕ್ಷಣ ಕೇಂದ್ರದ ಪರಿಸ್ಥಿತಿಯೂ ಹಾಗೆಯೇ ಇದೆ.

ಮೆಸ್ಸಿನಲ್ಲಿ ಊಟಕ್ಕೆ ಕುಳಿತಾಗ— ಏನೋ ಯಾವದೋ ಕಾರಣ ದಿಂದಾಗಿ ಒಬ್ಬ ಕಲಿಸುವ ಸೈನಿಕ– ಒಬ್ಬ ರಿಕ್ರೂಟನನ್ನು ನುಗಿಸಿದ. ಹೀಗೆ ನುಗಿಸಿಕೊಂಡವ ಮದ್ರಾಸಿ ಇದ್ದ. ಆತ ನೆಲಕ್ಕುರುಳಿದ. ತಲೆಗೆ ಕೊಂಚ ಪೆಟ್ಟು ಬಿದ್ದಿತು. ಪೆಟ್ಟು ಬಲವಾಗಿಯೇ ತಾಕಿರಬೇಕು– ಆತ ಮೂರ್ಛೆ ಹೋದ. ಎಲ್ಲ ಮದ್ರಾಸಿಗಳೂ ಅದನ್ನು ನೋಡಲು ಬಂದರು. ಕೆಲ ವರು ಆತನಿಗೆ ಪ್ರಥಮೋಪಚಾರ ನೀಡತೊಡಗಿದರು. ಹೊಡೆದ ಸೈನಿಕ ಪಂಜಾಬಿಯಾಗಿದ್ದ. ಸರಿ ೮–೧೦ ನಿಮಿಷದಲ್ಲಿಯೇ ಪ್ರಾಂತೀಯತೆಯ ಅಭಿ ಮಾನ ತಾಂಡವವಾಡತೊಡಗಿತು. ಒಮ್ಮಿಂದೊಮ್ಮೆಲೇ ಮದ್ರಾಸಿಗಳು ಒಂದೆಡೆ ಸೇರಿ, ಕೈಗೆ ಸಿಕ್ಕ ಕಲಿಸುವ ಸೈನಿಕರನ್ನು ಬಡೆಯತೊಡಗಿದರು. ಒಂದರ್ಧ ತಾಸಿನಲ್ಲಿ ಸಾಕ್ಷಾತ್ ಪ್ರಳಯರುದ್ರ ಅವತರಿಸಿದಂತಾಗಿತ್ತು. ಆದರೆ ಸೈನಿಕ ಶಿಕ್ಷಣ ಕೇಂದ್ರಗಳಲ್ಲಿ ಇಂಥ ಘಟನೆಗಳು ಮೇಲಿಂದಮೇಲೆ ನಡೆಯುತ್ತಿರಬೇಕು. ಅರ್ಧ ತಾಸಿನಲ್ಲಿಯೇ ಫೋರ್ಟಿನ್ಥ ಬಲೂಚ ರೆಜಿಮೆಂಟ ಧಾವಿಸಿತು. ಕೇಂದ್ರ ವೆಲ್ಲ ಸ್ತಬ್ಧವಾಯಿತು. ಆ ಶಾಂತಿ ನೋಡುವಂತಿತ್ತು. ಭಯಪೂರಿತವಾದ್ರ ಶಾಂತಿ.

ಮುಂದೆ ಒಂದು ತಿಂಗಳ ವರೆಗೆ ಕೋರ್ಟ ಮಾರ್ಶಲ ನಡೆದು, ಕಾರಣ-ಪುರುಷರೆನಿಸಿಕೊಂಡ ೬-೭ ಮದ್ರಾಸಿಗಳಿಗೆ ಮೂರು ಮೂರು ವರುಷ ಸಕ್ತ ಸಜಾ ವಿಧಿಸಲಾಯಿತು.

## ನೇತಾಜಿ ಸುಭಾಸರ ವಿಷಯ ಅಪಪ್ರಚಾರ

ಸಾಮಾನ್ಯವಾಗಿ ಶತ್ರು ರಾಷ್ಟ್ರಗಳ ಅಧೀನಕ್ಕೊಳಗಾದ ಪ್ರದೇಶಗಳಲ್ಲಿಯ ವಿವಿಧ ಚಟುವಟಿಕೆಗಳು ಈ ಬದಿಯ ಸೈನಿಕರಿಗೆ ತಿಳಿಯುತ್ತಿರುವದಿಲ್ಲ. ಸುಭಾಸ ಭೋಸರು ಆಗ ಭಾರತದಿಂದ ಮಾಯವಾದ ಸುದ್ದಿ ಮಾತ್ರ ಎಲ್ಲ ಸೈನಿಕರಿಗೆ (ಇತರ ನಾಗರಿಕರಿಗೆ ತಿಳಿದಂತೆ) ತಿಳಿದಿತ್ತು. ಆದರೆ ಅವರು

ಸಿಂಗಪೂರಿಗೆ ಹೋಗಿ ಅಲ್ಲಿ ಆಝಾದ ಹಿಂದ ಫೌಜ ಸ್ಥಾಪಿಸಿದ ಸಾಹಸದ ಸುದ್ದಿಗಳು ಸೈನಿಕರಿಗೆ ತಲುಪುವದು ದುಸ್ತರವಾಗಿದ್ದಿತು. ನಮ್ಮನ್ನಾಳುವ ಸರಕಾರಕ್ಕೆ ಒಂದು ಬಲವಾದ ಸಂದೇಹ. ಬ್ರಿಟಿಶ ಸರಕಾರಕ್ಕೆ ಮಾತ್ರ ಆ ವಿಷಯ ವಿದಿತವಾಗಿತ್ತು. ತಮಗೆ ತಿಳಿದ ಸಂಗತಿ ಉಳಿದ ಭಾರತೀಯ ಸೈನಿಕರಿಗೂ ತಿಳಿದಿರಬೇಕು. ಎಂಬ ಬಲವಾದ ಶಂಕೆ ಅವರಿಗೆ. ಅವರ ಈ ಸಂದೇಹಕ್ಕೆ ಬಲವಾದ ಕಾರಣವೂ ಇದ್ದಿತು. ಸುಭಾಸರ ಆಝಾದ ಹಿಂದ ಫೌಜಿನ ಕೆಲವು ಗುಪ್ತಚಾರರು 'ಜಪಾನೀ ಸಬ್ ಮರೀನಿನಿಂದ ಭಾರತವನ್ನು ಪ್ರವೇಶಿಸಿ ಸುಭಾಸರ ಸಾಹಸದ ಸುದ್ದಿ ಮತ್ತು I. N. A. ವಿಷಯವಾಗಿಯೂ ಪ್ರಚಾರ ನಡೆಸಿದ್ದರು. ತಮ್ಮ ವಶದಲ್ಲಿರುವ ಭಾರತೀಯ ಸೈನಿಕರಲ್ಲಿ ಸುಭಾಸರ ವಿಷಯವಾಗಿ ಅಭಿಮಾನಕ್ಕೆ ಆಸ್ಪದ ಕೊಡದ ಹಾಗೆ ಅವರ ವಿಷಯವಾಗಿ ಈ ಸರಕಾರ ಅಪಪ್ರಚಾರಕ್ಕೆ ತೊಡಗಿತು. ವಾರಕ್ಕೊಂದು ಸಲ ಸೈನಿಕರ ಶಿಕ್ಷಣ ಕೇಂದ್ರದಲ್ಲಿ ಅವರ ಮೋಸತನ(?)ದ ವಿಷಯವಾಗಿ ವ್ಯಾಖ್ಯಾನದ ಪದ್ಧತಿ ಜಾರಿಯಲ್ಲಿ ಬಂದಿತು. ಈ ಅಪಪ್ರಚಾರದ ಪರಿಣಾಮ ಮಾತ್ರ ತೀರ ವಿರುದ್ಧವಾಗ ತೊಡಗಿತು. ಬ್ರಿಟಿಶರ ಉದ್ದೇಶ ಸಫಲವಾಗುವದಂತಿರಲಿ— ಅದರ ಬದಲು ಬ್ರಿಟಿಶರ ವಿಷಯವಾಗಿ ಒಳಗೊಳಗೆ ಕುದಿಯುತ್ತಿದ್ದ ಉರಿ—ದ್ವಿಗುಣಿತವಾಗುತ್ತ ನಡೆದಿತ್ತು. ಬ್ರಿಟಿಶ ಸರಕಾರದ ಹೊಣೆಗೆಟ್ಟ ಅಪಪ್ರಚಾರದ ರೀತಿಯೇ ಇದಕ್ಕೆ ಕಾರಣ. ಅವರ ಅಪಪ್ರಚಾರದಿಂದ ಒಂದು ದೊಡ್ಡ ಲಾಭ ಮಾತ್ರ ಆಯಿತು. ಅದೆಂದರೆ ಸುಭಾಸರ ವಿಷಯವಾದರೂ ಸೈನಿಕರಿಗೆ ತಿಳಿಯತೊಡಗಿತು.

ಸುಭಾಸರ ಆಝಾದ ಹಿಂದ ಸೇನೆಯ ಕೆಲವು ಗುಪ್ತಚಾರರು ಭಾರತದಲ್ಲಿ ಪ್ರವೇಶಿಸುತ್ತಿದ್ದರು. ಮತ್ತು ಭಾರತದಲ್ಲಿ ಬಂದು ತಮ್ಮ ಪ್ರಚಾರ ಕಾರ್ಯ ನಡೆಸಿದ್ದರು ಎಂಬುದು, ಒಂದು ದೃಷ್ಟಾಂತದಿಂದ ಮನದಟ್ಟಾಯಿತು. ಆ ಸತ್ಯ ಕತೆ ೧೯೪೪ ರಲ್ಲಿ ಘಟಿಸಿದ್ದು. ಈ ಕತೆ ತೀರ ಸತ್ಯವಾದದ್ದು.

೨೧-೫-೧೯೪೪

೧೯೪೪ ನೇ ಇಸ್ವಿ ಮೇ ೨೧ನೇ ತಾರೀಖಿಗೆ ದಿಲ್ಲಿ ಆಕಾಶವಾಣಿಗೆ ಕಿವಿಗೊಟ್ಟವರಿಗೆ ಈ ಕತೆ ಗೊತ್ತಿರಲೇಬೇಕು.

ಮಲಾಯದಲ್ಲಿ ಆಝಾದ ಹಿಂದ ಸೇನೆಯಲ್ಲಿ ಕೆಲವರನ್ನು ಗುಪ್ತಚಾರ ಕೆಲಸಕ್ಕಾಗಿ ಆರಿಸಲಾಯಿತು. ಅದರಲ್ಲಿ ಮೂರು ಮೂರು ಸೈನಿಕರು

ಇರುತ್ತಿದ್ದರು. ಒಂದು ತಂಡದಲ್ಲಿ ಹವಾಲ್ದಾರ ಮಹಮ್ಮದ ಯುಸೂಫಖಾನ, ನಾಯಿಕ ಆಸಫ ನೂರಖಾನ ಮತ್ತು ನಾಯಿಕ ಸಯ್ಯದ ಮಹಮ್ಮದ ಈ ಮೂವರಿಗೂ ಆ ಕೆಲಸಕ್ಕಾಗಿ ತರಬೇತುಗೊಳಿಸಿ ಭಾರತಕ್ಕೆ ಗೌಪ್ಯವಾಗಿ ಕಳಿಸಲು ಎಲ್ಲ ಸಿದ್ಧತೆಗಳನ್ನು ಮಾಡಲಾಯಿತು. ಅವರು ಮಲಾಯಾದ ದಂಡೆಯನ್ನು ಬಿಡುವ ಮೊದಲು ಸ್ವತಃ ನೇತಾಜಿಯವರೇ ಅವರನ್ನು ಕಂಡು ಹುರುದುಂಬಿಸಿ ಅವರು ಭಾರತಕ್ಕೆ ಹೋದಮೇಲೆ ಅವರು ಮಾಡುವ ಕಾರ್ಯವನ್ನು ತಿಳಿಸಿ ಹೇಳಿ ಆಶೀರ್ವದಿಸಿದರು. ಅವರು ಹೊರಡುವ ಪೂರ್ವದಲ್ಲಿ ಅವರಿಗೆ ಒಟ್ಟು ೨ ವಜ್ರಗಳು, ಪ್ರತಿಯೊಬ್ಬರಿಗೆ ಎರಡೆರಡು ಪಿಸ್ತೂಲು ಮತ್ತು ಮೂರು ಹುಕ್ಕಾಗಳನ್ನು ಅವರಿಗೆ ಕೊಡಲಾಯಿತು. ೧೯೪೪ನೇ ಫೆಬ್ರುವರಿ ೨೭ನೇ ದಿನ ಸಂಜೆ ೬॥ ಘಂಟೆಗೆ ಜಪಾನೀ ಸಬ್ ಮರೀನಿನಲ್ಲಿ ಕುಳಿತು ಮಲಾಯದ ಕಡಲ ದಂಡೆಯನ್ನು ಬಿಟ್ಟು ಭಾರತಾಭಿಮುಖವಾಗಿ ಪ್ರಯಾಣ ಪ್ರಾರಂಭಿಸಿದರು. ಆ ಸಬ್‌ಮರೀನ ಚಲಾಯಿಸುವ ಕ್ಯಾಪ್ಟನ್‌ನ ಹೆಸರು "ಮುಸಾಕಾ" ಎಂದಿದ್ದಿತು. ಆ ಹುಕ್ಕಾಗಳು ಕಾಣಿಸುವದಕ್ಕೆ ತಂಬಾಕು ಸೇದುವ ಹುಕ್ಕಾಗಳಂತಿದ್ದರೂ ಅವುಗಳ ಒಳಗೆ ವಾಯರ್ಲೆಸ್ ಸೆಟ್ಟನ್ನು ಜೋಡಿಸಲಾಗಿತ್ತು. ಸಬ್‌ಮರೀನು ೩೦ ದಿನಗಳ ಪ್ರವಾಸದ ನಂತರ ೧೭ನೇ ಮಾರ್ಚ ೧೯೪೪ನೇ ದಿನ ಭಾರತದ ಕಲಾತ್ ಸಂಸ್ಥಾನದ ಕಡಲ ತಡಿಯಿಂದ ೭ ಮೈಲುಗಳಮೇಲೆ ಬಂದು ನಿಂತಿತು. ಹಗಲು ಸರಿದು ರಾತ್ರಿಯೊದಮೇಲೆ ಮುಸಾಕಾ ಸಬ್ ಮರೀನನ್ನು ನೀರ ಮೇಲಕ್ಕೆ ತಂದು ಸುತ್ತಲೂ ನೋಡಿದ. ಕಡಲು ಶಾಂತವಾಗಿತ್ತು. ಆ ಮೂವರನ್ನು ರಬ್ಬರು ಡೋಣಿಗಳಲ್ಲಿ ಕೂಡಿಸಿ ತಾನು ಮತ್ತೆ ಸಿಂಗಾಪೂರಿಗೆ ಮರಳಬೇಕಿತ್ತು. ಅಲ್ಲಿ ಕಡಲತಡಿಯಲ್ಲಿ ಒಂದೂ ಊರು ಇರಲಿಲ್ಲ. ಮುಸಾಕಾ ಆ ಮೂವರನ್ನು ಕರೆದು ಹೇಳಿದ "ನೀವು ರಬ್ಬರು ಬೋಟಿನಲ್ಲಿ ಕುಳಿತು ದಂಡೆ ಮುಟ್ಟಿರಿ. ದಂಡೆಯಿಂದ ಮೂರು ಫರ್ಲಾಂಗು ಒಳಗೆ ಹೋದಿರೆಂದರೆ ಅಲ್ಲಿ ನಿಮಗೊಂದು ಹಳ್ಳಿ ಹತ್ತುತ್ತದೆ. ಅದರ ಹೆಸರು 'ಪಾಸ್ನಿ' ಎಂದು."

ನಂತರ ರಬ್ಬರು ಬೋಟಿನಲ್ಲಿ ಹವೆ ತುಂಬುವ ಕೆಲಸ ನಡೆಯಿತು. ಆದರೆ ದುರ್ದೈವವಶಾತ್ ಆ ರಬ್ಬರು ಬೋಟುಗಳು ಪಂಕ್ಚರ್ ಆಗಿಬಿಟ್ಟಿದ್ದವು. ಹೀಗಾಗಿ ಮುಸಾಕಾ ನಿರಾಶಗೊಂಡ. ನಿರಾಶಗೊಂಡವನಾದರೂ ಧೈರ್ಯಗೆಡಲಿಲ್ಲ. ಕಡಲಿನ ನಾಲ್ಕೂ ನಿಟ್ಟಿಗೆ ದೃಷ್ಟಿಯನ್ನು ಹರಿಯಿಸಿದ. ಅನತಿದೂರದಲ್ಲಿ

ಕಂದೀಲಿನ ಮಂಜು ಬೆಳಕು ಕಾಣಿಸಿತು. ದೂರದರ್ಶಕ ಯಂತ್ರದಿಂದ ನೋಡಿದಾಗ ಅದೊಂದು ಮೀನುಗಾರನ ಡೋಣಿ ಇದ್ದಿತು. ಮುಸಾಕಾ ತಟ್ಟನೇ ತನ್ನ ಬಂದೂಕನ್ನು ಸರಿಪಡಿಸಿಕೊಂಡು ಗುರಿ ಇಡತೊಡಗಿದ. ಆಗ ಮೂವರೂ ಅವನಿಗೆ ಅಡ್ಡವಾಗಿ ನಿಂತು ಕೇಳಿದರು.

"ಏನು ಮಾಡುತ್ತಿರುವೆ ?"

"ಆ ಮೀನುಗಾರನನ್ನು ಕೊಲ್ಲುವೆ."

"ಏಕೆ ?"

"ಅಂದರೆ ಆ ಡೋಣಿ ನಮ್ಮದಾಗುವದು. ನಿಮ್ಮ ಮುಂದಿನ ಪ್ರಯಾಣಕ್ಕೆ ಅನುಕೂಲವಾಗುವದು."

"ಛೆ, ಆತನೊಬ್ಬ ಭಾರತೀಯ. ಆತನನ್ನು ಕೊಲ್ಲಿಸಗೊಡಲಾರೆವು."

"ಜೀವಕ್ಕಾಗಿ ಇಷ್ಟೊಂದೇಕೆ ಚಟಪಡಿಸುವಿರಿ. ೪೦ ಕೋಟಿ ಜನರಲ್ಲಿ ಒಂದು ತಗಣಿ ಸತ್ತರೆ ಆಗುವ ನಷ್ಟವೇನು ?" ಮೂವರೂ ವಿರೋಧಿಸಿದ್ದರಿಂದ ಮುಸಾಕಾ ತನ್ನ ನಿರ್ಧಾರವನ್ನು ಬದಲಿಸಿದ. ರಬ್ಬರು ಡೋಣಿಗಳನ್ನು ಸರಿಪಡಿಸುವ ಕೆಲಸದಲ್ಲಿ ತೊಡಗಿದ. ಆ ಡೋಣಿಗಳನ್ನು ಸರಿಪಡಿಸುವದಕ್ಕೆ ಸುಮಾರು ೮ ದಿನಗಳು ಹಿಡಿದವು. ೨೫ನೇ ಮಾರ್ಚ ೧೯೪೪ಕ್ಕೆ ಯುಸೂಫಖಾನ, ಅಸಫನೂರಖಾನ್ ಮತ್ತು ಸಯ್ಯದಮುಹಮ್ಮದರು ಪಾಸ್ನಿ ಹಳ್ಳಿಯ ಹತ್ತಿರದ ದಂಡೆಗೆ ಇಳಿದರು.

೩೧ನೇ ಮೇ ೧೯೪೪ನೇ ದಿನ ಯುಸೂಫಖಾನ್ ದಿಲ್ಲಿ ರೇಡಿಯೋದಲ್ಲಿ ಭಾಷಣ ಮಾಡಿದ. ಅದರಲ್ಲಿ ತಮ್ಮ ಸಾಹಸ(?) ಮಯ ಪ್ರವಾಸ ವರ್ಣಿಸಿದ. ಮುಂದಿನ ಮಾತುಗಳನ್ನು ಅವರ ಬಾಯಿಯಿಂದಲೇ ಕೇಳುವದು ಒಳಿತು.

"ಯಹ್ ಆಲ್ ಇಂಡಿಯಾ ರೆಡಿಯೋ ದಿಲ್ಲಿ ಹೈ. ಆಜ ಮೇ ಇಕ್ಕಿಸ್. ಏಟಥ್ ಇನ್‌ಫಂಟ್ರಿ ಬ್ರಿಗೇಡಕೆ ನವಜವಾನ್ ಯುಸೂಫಖಾನ್ ಅಪನೀ ಸಾಹಸ ಮಯ ಕಹಾನಿ ಸುನಾಯೆಂಗೆ— ಯುಸೂಫಖಾನ್."

"... ....ನಾವು ಮೂವರೂ ದೇಶಕ್ಕೆ ಪಾರಾಗಿ ಬರುವದಕ್ಕೆ ಇದೊಂದೇ ಉಪಾಯವಿದ್ದುದನ್ನು ಕಂಡು ಅಝಾದ ಹಿಂದ ಸೇನೆಗೆ ಒಳ್ಳೆ ವಿಧೇಯರಾಗಿ ದ್ದಂತೆ ತೋರಿಸಬೇಕೆಂದು ನಿರ್ಧರಿಸಿದ್ದೆವು. ಅಂತೂ ೨೭ ದಿನಗಳ ನಂತರ

ಪಾಸ್ನಿ ಹತ್ತಿರ ಇಳಿದೆವು. ಅಲ್ಲಿ ಕಡಲ ದಂಡೆಯಲ್ಲಿ ನಮ್ಮ ರಬ್ಬರು ಡೋಣಿಗಳನ್ನು ಹುಗಿದು ಆ ಹಳ್ಳಿಯ ಜಮೀನದಾರರ ಎದುರು ನಮ್ಮ ಕರುಣಕತೆಯನ್ನು ತೋಡಿಕೊಂಡೆವು. ಅರ್ಝೂದ ಸರಕಾರವೆಂದರೆ ಜಪಾನೀಯರ ಕೈಗೊಂಬೆ. ನಾವು ಮರಳಿ ನಮ್ಮ ದೇಶಕ್ಕೆ ಬಂದಿದ್ದೇವೆ. ನಮನ್ನು ರಕ್ಷಿಸುವ ಬ್ರಿಟಿಶರ ಸೇವೆಗೆ ಕಂಕಣಬದ್ಧರಾಗಿರಲು ಬಂದಿದ್ದೇವೆ. ಅರ್ಝೂದ ಸರಕಾರಕ್ಕೆ ಸ್ವತಂತ್ರ ಅಸ್ತಿತ್ವವೇ ಇಲ್ಲ. ಅವರು ನಮಗೆ ಕೊಟ್ಟ ಕಷ್ಟವನ್ನು ಅರ್ಧ ಗಂಟೆಯಲ್ಲಿ ಹೇಳಲು ಆಗುವದಿಲ್ಲ. ಸಬ್ ಮರೀನಿನಲ್ಲಿ ಬರುವಾಗ ಒಂದು ದಿನ ತಿನ್ನಲು ಬೇಕೆಂತಲೇ ಹಂದಿಯ ಮಾಂಸವನ್ನು ಕೊಡಲಾಯಿತು. ಇದರಲ್ಲಿ ಅರ್ಝೂದ ಸರಕಾರದ ಅಂಗವಿದ್ದರೂ ಇರಬಹುದು. ನಾವು ಪ್ರತ್ಯಕ್ಷವಾಗಿ ಕಂಡದ್ದನ್ನು ತಮ್ಮೆದುರು ಹೇಳಿದ್ದೇವೆ. ಅರ್ಝೂದ ಸರಕಾರವೆಂದರೆ ಹೊಲದಲ್ಲಿ ಕಟ್ಟಿದ ಬೆದರು."

ಈ ಒಂದು ದೃಷ್ಟಾಂತದಿಂದ ಬ್ರಿಟಿಶರ ಸಂದೇಹ ಹೆಚ್ಚಾಗತೊಡಗಿತು. ಈ ರೀತಿಯಾಗಿ ಇನ್ನೂ ಎಷ್ಟು ಜನ ಭಾರತವನ್ನು ಗೌಪ್ಯವಾಗಿ ಪ್ರವೇಶಿಸಿದ್ದಾರೋ ಎಂದು ಅವರ ಚಿಂತೆ ಹೆಚ್ಚಾಗತೊಡಗಿತು.

೨

ಸೈನಿಕ ಶಿಕ್ಷಣ ಕೇಂದ್ರದಲ್ಲಿಯ ಶಿಕ್ಷಣ, ಮುಗಿದ ನಂತರ ಒಂದು ತಿಂಗಳು ರಜೆಯನ್ನು ಕೊಟ್ಟು, ರಜೆ ಮುಗಿದ ನಂತರ ಶಹಜಹಾನಪೂರ ಹೋಲ್ಡಿಂಗ ಯುನಿಟ್ಟಿಗೆ ಹಾಜರಾಗಲು ತಿಳಿಸಿದರು. ಸೈನಿಕ ಶಿಕ್ಷಣ ಕೇಂದ್ರದಲ್ಲಿಯ ೬ ತಿಂಗಳ ವಾಸ್ತವ್ಯದಲ್ಲಿ— ಆ ಸೈನಿಕರ ಸಹವಾಸದಲ್ಲಿ— ನಾನು ಸಂಪೂರ್ಣ ಬದಲಾಗಿದ್ದೆನು. ಆ ಸೈನ್ಯಜಾತಿಯ ಇರುವು, ನಡೆನುಡಿ ಎಲ್ಲವನ್ನೂ ಅರಗಿಸಿಕೊಂಡು ಹದಿನಾರಾಣೆ ಸೈನಿಕನಾಗಿದ್ದೆ. ರಜೆ ಸಿಕ್ಕಾಕ್ಷಣ ಮನಸ್ಸಿಗೆ ಆನಂದವಾಯಿತು. ಆ ಆನಂದದ ಭರದಲ್ಲಿ ರೈಲುಪ್ರವಾಸದ ದುಃಖವನ್ನು ಮರೆತು ಮನೆಯನ್ನು ಮುಟ್ಟಿದೆನು. ಮನೆಯಲ್ಲಿ ತಾಯಿ ಆಗಲೇ ತೀರಿಕೊಂಡಿದ್ದಳು. ಮುದುಕಿ ಅಜ್ಜಿಯೂ ಇಹಲೋಕದ ಯಾತ್ರೆಯನ್ನು ಮುಗಿಸಿದ್ದಳು. ಮನೆಯಲ್ಲಿ ತಂದೆ ಮತ್ತು ತಮ್ಮ, ತಂಗಿಯರು ಇಷ್ಟೇ— ಒಂದು ತಿಂಗಳ ರಜೆ ಅಂತೂ ಮುಗಿಯಿತು. ಅಂತೂ ಮತ್ತೆ ಮರಳಿದೆ. ಮನೆ ಬಿಡುವಾಗ ಒಂದು ಹನಿ ನೀರು ಕಣ್ಣಲ್ಲಿಂದ ಉದುರಿತು. ಅವಧಿ ಮುಗಿದಿತ್ತು. ಇರಲು ಬರುವಂತಿಲ್ಲ. ಹೊರಡಲು ಮನಸ್ಸಿಲ್ಲ. ಈ ಹಗ್ಗಜಗ್ಗಾಟವನ್ನು ಅನುಭವಿಸಿಯೆ ತಿಳಿದುಕೊಳ್ಳಬೇಕು. ಅಂತೂ ಹೊರಡಲೇಬೇಕಾಯಿತು. ೪ ದಿನಗಳ ದೀರ್ಘ ಪ್ರವಾಸದ ನಂತರ ಶಹಜಹಾನಪೂರ ಹೋಲ್ಡಿಂಗ ಯುನಿಟ್ಟನ್ನು ಮುಟ್ಟಿದೆನು. ನನ್ನಂತೆ ಟ್ರೇನಿಂಗ ಮುಗಿಸಿ ಅಲ್ಲಿಗೆ ಬಂದ ಶ್ರೀ ನಥೂರಾಮ ಜಾನೆ, ಶ್ರೀ ಯನ್ನಾಲಾಲ ಚವರೆ (ನಾಗಪೂರದವರು) ಭೆಟ್ಟಿಯಾದರು. ಇದ್ದುದರಲ್ಲಿಯೇ ಸಮಾಧಾನವಾಯಿತು. ದುಃಖಪಡುತ್ತಿರುವವನು ನಾನೊಬ್ಬನೇ ಅಲ್ಲ ಎಂಬುದು ಅವರ ಕರುಣಕತೆಯನ್ನು ಕೇಳಿ ತಿಳಿದುಕೊಂಡೆನು. ಮನಸ್ಸಿಗೆ ಅಷ್ಟೇ ಸ್ವಲ್ಪ ಸಮಾಧಾನವಾಯಿತು. ಹೋಲ್ಡಿಂಗ ಯುನಿಟ್ಟಿನಲ್ಲಿಯ ಜೀವನ ಅಷ್ಟು ತೊಂದರೆಯದಲ್ಲ. ದಿನದಲ್ಲಿ ಎರಡು ಮೂರು ಸಲ ಪರೇಡು ಅಷ್ಟೆ. ದಿನವೂ ಒಂದೊಂದು ತಂಡವನ್ನು ಫ್ರಂಟಿಗೆ ಕಳಿಸಲಾಗುತ್ತಿತ್ತು. ಯಾವ ಫ್ರಂಟಿನಲ್ಲಿ ಸೈನಿಕರ ಅವಶ್ಯಕತೆ ಇದೆಯೋ ಅಲ್ಲಿಗೆ ಕಳಿಸಲಾಗುತ್ತಿತ್ತು. ಅದಕ್ಕಾಗಿ, ದಿನವೂ ನಾವು ತಯಾರಿಯಿಂದಲೇ ಇರಬೇಕಾಗುತ್ತಿತ್ತು. ಹೋಲ್ಡಿಂಗ ಯುನಿಟ್ ಎಂದರೆ ತರಬೇತುಗೊಳಿಸಿದ ಸೈನಿಕರನ್ನು ಸಪ್ಲಾಯ ಮಾಡುವ ಸಂಸ್ಥೆ. ಈ ಹೋಲ್ಡಿಂಗ ಯುನಿಟ್ಟಿನಲ್ಲಿ ಬಹಳ ದಿನಗಳ ವರೆಗೆ ಉಳಿಯಲಿಲ್ಲ. ಏಳೇ ದಿನಗಳಲ್ಲಿ ನನ್ನ

ಸರತಿಯೂ ಬಂದಿತು. ಒಂದು ಗುಂಪಿನಲ್ಲಿ ನನ್ನನ್ನು ಒಗೆಯಲಾಯಿತು. ಬರ್ಮಾ ಫ್ರಂಟ. ಬರ್ಮಾ ಫ್ರಂಟ ಎಂದು ಮೇಲಿನವರು ಮೊದಲು ತಿಳಿಸಲಿಲ್ಲ. ನಮಗಾಗಿ ಹೊಸ ಅರಿವೆಗಳನ್ನು ಕೊಡಲಾಯಿತು. ನಮಗೆ ಕೊಡಮಾಡಿದ ಸಮವಸ್ತ್ರಗಳೆಲ್ಲವೂ ಹಸರು ಬಣ್ಣದವು ಇದ್ದವು. ಅದರಮೇಲಿಂದ ನಾವು ಹೋಗಲಿರುವ ರಣಾಂಗಣ ತಿಳಿಯಿತು. ಬರ್ಮಾ ಮತ್ತು ಆಗ್ನೇಯ ಏಶಿಯಾಕ್ಕೆ ಕಳಿಸಿಕೊಡುವ ಸೈನಿಕರ ಸಮವಸ್ತ್ರಗಳೆಲ್ಲವೂ ಹಸಿರು ಬಣ್ಣದವು. ರಣಾಂಗಣದ ಮುಖ್ಯ ತಂತ್ರಗಳಲ್ಲಿ ಒಂದಾದುದೆಂದರೆ "Camouflage" ಹೊಂದಿಕೊಳ್ಳುವ ಬಣ್ಣ. ಅದರ ಉಪಯುಕ್ತತೆಯ ಮಹತ್ವ ಬಾಯಿಯಿಂದ ತಿಳಿಸಿ ಹೇಳಲು ಬರುವಂತಿಲ್ಲ.

ಸಾಮಾನ್ಯವಾಗಿ ಯುದ್ಧ ನಡೆದ ಸ್ಥಳದಲ್ಲಿ ಎದರು ಬದರು ತೀರ ದೂರದಲ್ಲಿ ಸೈನಿಕರು ಕುಳಿತು ಕಾದುತ್ತಿರುತ್ತಾರೆ. ಈ ಇಕ್ಕೆಲ ಸೈನಿಕರ ನಡುವೆ ಕೆಲ ಪ್ರದೇಶವಿರುತ್ತದೆ. ಅದನ್ನು ಸೈನಿಕ ಶಬ್ದಕೋಶದಲ್ಲಿ "No man's land" ಯಾರ ಸ್ವಾಧೀನಕ್ಕೂ ಒಳಪಡದ ಪ್ರದೇಶವೆಂದು ಕರೆಯುತ್ತಾರೆ. ಈ ಪ್ರದೇಶದಲ್ಲಿಯ ಮುಖ್ಯ ವೈಶಿಷ್ಟ್ಯವೆಂದರೆ ಅಲ್ಲಿಯ ತುಂಬಾ ಅನಿಶ್ಚಿತ ಪರಿಸ್ಥಿತಿ. ಒಂದು ಮುಂಜಾನೆ ಅದು ಮಿತ್ರ ಸೈನಿಕರ ವಶದಲ್ಲಿದ್ದರೆ ಸಂಜೆ ಶತ್ರು ಸೈನಿಕರ ವಶಕ್ಕೆ ಹೋಗಿರುತ್ತದೆ. ಈ ನೋಮಾನ್ಸಲ್ಯಾಂಡಿನಲ್ಲಿ ನಮ್ಮ ಸೈನಿಕರ ಚಲನವಲನಗಳನ್ನು ಶತ್ರುಪಕ್ಷದ ಸೈನಿಕರು ಕಣ್ಣಲ್ಲಿ ಎಣ್ಣೆಯನ್ನು ಹಾಕಿಕೊಂಡು ನಿರೀಕ್ಷಿಸುತ್ತಿರುತ್ತಾರೆ. ಅವರ ಕಣ್ಣು ತಪ್ಪಿಸಿ ಮುನ್ನಡೆಯುವ ಮಹಾಕಾರ್ಯವನ್ನು ಸಾಧಿಸಬೇಕಾದರೆ ಕೆಮೂಫ್ಲೋಜಿನ ಅವಶ್ಯಕತೆ ತುಂಬಾ ಇದೆ. ಬರ್ಮಾದಲ್ಲಿ ಅಡವಿ ಬಹಳವಿದ್ದುದರಿಂದ ಸುತ್ತಮುತ್ತಲೂ ಹಸಿರು ಬಣ್ಣ ಒಡೆದು ಕಾಣಿಸುತ್ತದೆ. ಅದೇ ಬಣ್ಣದ ವಸ್ತ್ರಗಳನ್ನು ಧರಿಸಿ ಸಾವಕಾಶವಾಗಿ ಮುನ್ನಡೆದರೆ ಶತ್ರುಗಳ ಗಮನಕ್ಕೆ ಅದು ಬರಲಾರದು. ಹಸಿರು ಹುಲ್ಲಿನಲ್ಲಿ ಓಡಾಡುವ ಹಾವು ಹಸಿರು ಬಣ್ಣದ್ದೇ ಇರುತ್ತದೆ. ಕಡ್ಲೀಗಿಡದಲ್ಲಿಯ ಹುಳು ನೋಡಿದ್ದೀರಾ, ಅದೂ ಹಸಿರಾಗಿಯೇ ಇರುತ್ತದೆ. ಅದು ಬೇಗನೇ ನಿಮ್ಮ ಗಮನಕ್ಕೆ ಬರುವದಿಲ್ಲ. ಈ ಹಸಿರು ಪ್ರದೇಶದಲ್ಲಿ ಓಡಾಡುವ ಮೋಟಾರುಗಳಿಗೂ ಟೊಂಗೆಗಳನ್ನು ಕಟ್ಟಿ ಕೆಮೂಫ್ಲೇಜನ್ನು ಮಾಡುತ್ತಾರೆ. ಹೀಗೆಯೇ ಮಿಡಲ್ ಈಸ್ಟಕ್ಕೆ ಹೋಗುವ ಸೈನಿಕರಿಗೆ ಖಾಕಿ ಬಣ್ಣದ ಡ್ರೆಸ್ಸು. ಒಂದುಸಲ ಮದ್ರಾಸ್ ಸ್ಯಾಪರ್ಸ್ ಮತ್ತು ಮಾಯಿನರ್ಸ್ ತಂಡ, ಯುರೋಪದ ರಣರಂಗದಲ್ಲಿ ಕೆಲಸ

ಮಾಡುತ್ತಿತ್ತು. ಚಳಿಗಾಲವಿದ್ದುದರಿಂದ ಸುತ್ತುಮುತ್ತಲೂ ಹಿಮ ಬಿದ್ದಿತ್ತು. ಈ ಬರ್ಫಿನಮೇಲೆ ಈ ಮದ್ರಾಸೀ ಸೈನಿಕರು ಓಡಾಡುವಾಗ ಬರ್ಫದ ಅಚ್ಚ ಬಿಳೀ ಹಿನ್ನೆಲೆಯಲ್ಲಿ ಅವರ ಕಪ್ಪು ಮುಖಗಳು ದೂರದಿಂದ ನೋಡುತ್ತಿರುವ ಶತ್ರು ಸೈನಿಕರಿಗೆ ಕಂಡಿತು, ಕೂಡಲೇ ಫಾಯರಿಂಗ ನಡೆಯಿತು, ಆ ನಂತರ ಮದ್ರಾಸೀ ಸೈನಿಕರ ಮುಖಕ್ಕೆ ಬಿಳೀ ಬಣ್ಣ ಬಡೆಯತೊಡಗಿದರು. ಹೀಗಿದೆ ಕೆಮಾಫ್ಲೇಜಿನ ಮಹತ್ವ.

ನಮ್ಮ ಗುಂಪಿನಲ್ಲಿ ೫೦ ಜನ ಸೈನಿಕರಿದ್ದೆವು. ನನ್ನ ಮೊದಲಿನ ಗೆಳೆಯರಾದ ಜಾನೀ ಮತ್ತು ಚವರೆ ಈ ಗುಂಪಿನಲ್ಲಿ ಬಂದಿರಲಿಲ್ಲ. ಮೊದಮೊದಲು ಕೊಂಚ ಕೆಡಕೆನಿಸಿತು. ನಮ್ಮ ಗಾಡಿ ಬಿಡುವವರೆಗೆ ಆ ದುಃಖವಿತ್ತು. ಆ ನಂತರ ಹೊಸ ಗೆಳೆಯರು ಆ ಗುಂಪಿನಲ್ಲಿಯೇ ಸಿಕ್ಕರು-- ಮುಂದೆ ಅವರಲ್ಲಿ ಜ್ಯೋತಿರ್ಮೋಹನ ಮುಖರ್ಜಿ ನನ್ನ ಜೀವದ ಗೆಳೆಯನಾದ. ೩ ದಿನಗಳ ನಂತರ ನಾವು ಇಂಫಾಲನ್ನು ಮುಟ್ಟಿದೆವು. ಇಂಫಾಲದಲ್ಲಿ ಮಿತ್ರ ಸೈನಿಕರ ದೊಡ್ಡ ಬೇಸ್ ಹೆಡ್‌ಕ್ವಾರ್ಟರವಿದ್ದಿತು. ಅಲ್ಲಿಂದ ಬರ್ಮಾಗಡಿ ಕೇವಲ ೧೭-೧೮ ಮೈಲಿನ ಮೇಲೆಯೇ ಇತ್ತು. ಈಗಾಗಲೇ ಬರ್ಮಾ, ಜಪಾನಿಗಳ ವಶಕ್ಕೆ ಹೋಗಿಬಿಟ್ಟಿತ್ತು. ಅದನ್ನು ಮರಳಿ ಪಡೆಯುವ ಉದ್ದೇಶದಿಂದ ಇಂಫಾಲದಲ್ಲಿ ಮಿತ್ರ ಸೈನ್ಯ ಠಾಣೆ ಬಿಟ್ಟು ಸಾವಕಾಶವಾಗಿ ಬರ್ಮಾಗಡಿಯನ್ನು ಪ್ರವೇಶಿಸತೊಡಗಿತ್ತು. ಬರ್ಮಾಗಡಿಯನ್ನು ಪ್ರವೇಶಿಸಿದನಂತರ ೧೦-೧೫ ಮೈಲುಗಳ ಮೇಲೆಯೇ ಚಿಂದ್ವಿನ್ ಹೊಳೆ ಅಡ್ಡವಾಗಿ ಹರಿಯುತ್ತಿದೆ. ಚಿಂದ್ವಿನ್ ನದಿಯ ಆಚೆಯ ಪ್ರದೇಶ ಸಂಪೂರ್ಣವಾಗಿ ಜಪಾನಿಗಳ ವಶದಲ್ಲಿತ್ತು. ಚಿಂದ್ವಿನ್‌ದ ಈ ಬದಿ ಮಿತ್ರ ಸೈನಿಕರ ವಶದಲ್ಲಿತ್ತು. ಜಪಾನಿಗಳು ಹೊಳೆ ದಾಟಿ ಭಾರತ ಗಡಿಯನ್ನು ಪ್ರವೇಶಿಸದಂತೆ ಮಿತ್ರ ರಾಷ್ಟ್ರಗಳು ಭಾರತೀಯ ಸೈನಿಕರ ಜೀವವನ್ನು ಪಣಕ್ಕೆ ಹಚ್ಚಿ ಹೋರಾಡುತ್ತಿದ್ದರು. ಬರ್ಮಾ ಮರಳಿ ಪಡೆದದ್ದು ಭಾರತೀಯ ಸೈನಿಕರ ಸಹಾಯದಿಂದಲೇ. ಈ ಬರ್ಮಾ ಪ್ರವೇಶದ ಕತೆ ಹೇಳುವ ಮುಂಚೆ ಬರ್ಮಾದೇಶದ ಸ್ಥಿತಿಗತಿಯ ಹಕ್ಕಿನೋಟ ಅವಶ್ಯ.

## ಬರ್ಮಾ-ಜಪಾನ ಆಡಳಿತದಲ್ಲಿ-ಒಂದು ಹಕ್ಕಿನೋಟ

ಬ್ರಹ್ಮದೇಶ ಹೆಸರಿನಲ್ಲಿ ಭಾರತೀಯ ಸಂಸ್ಕೃತಿಯ ತೀರ ಹತ್ತಿರದ ಶಬ್ದವಾದರೂ ಆ ಜನಗಳ ರೂಪು, ಭಾಷೆ ತೀರ ಬೇರೆ. ಬರ್ಮಾದಲ್ಲಿ ೪-೫

ಬೇರೆ ಬೇರೆ ಜನಾಂಗಗಳು ವಾಸಿಸುತ್ತವೆ. ಬರ್ಮೀಜ, ಶಾನ್ಸ್-ಚಿನ್ಸ್-ಕಚಿನ್ಸ್-ಆರಾಕಾನಿ ಮುಸ್ಲಿಂ, ಕರೆನ್ಸ್. ಒಟ್ಟು ಜನಸಂಖ್ಯೆಯು ಅರ್ಧಕ್ಕಿಂತಲೂ ಹೆಚ್ಚು ಜನ ಬರ್ಮೀಜರೇ ಇರುವರು. ಉಳಿದವರು ಅಲ್ಪಸಂಖ್ಯಾಕರು. ಈ ಜನವಲ್ಲದೆ ಹೊರದೇಶದಿಂದ ಬಂದುಳಿದವರೆಷ್ಟೋ ಜನವೂ ಇದೆ. ಚೀನಿಯರು, ಭಾರತೀಯರು, ಆಂಗ್ಲರು ಮತ್ತು ಆಂಗ್ಲೋ ಬರ್ಮನ್ನರು. ಭಾರತೀಯರಲ್ಲಿ ಹೆಚ್ಚಾಗಿ ತಮಿಳರು, ಸೀಖರು, ಮಲೆಯಾಳಿ ಕಾಕಾಗಳು ಇರುವರು. ಬರ್ಮಾ- ಇಂಗ್ಲಂಡ ಮತ್ತು ಫ್ರಾನ್ಸ ದೇಶಗಳನ್ನು ಒಟ್ಟುಗೂಡಿಸಿದರೆ ಆಗುವಷ್ಟು ದೊಡ್ಡದಿದೆ. ಒಟ್ಟು ಕ್ಷೇತ್ರಫಲ ೨,೬೦,೦೦೦ ಚೌರಸಮೈಲು. ದೇಶದ ತೀರ ಉದ್ದಳತೆ (ದಕ್ಷಿಣೋತ್ತರ) ೧೨೦೦ ಮೈ. ಮತ್ತು ಅಗಲಳತೆ ೬೦೦ ಮೈಲು ಇದೆ.

ದ್ವಿತೀಯ ಮಹಾಯುದ್ಧದಲ್ಲಿ ಜಪಾನು ಧುಮುಕಿದ ಕೆಲವೇ ದಿನಗಳಲ್ಲಿ ಅದು ರಭಸದ ಪ್ರಗತಿಯನ್ನು ಪಡೆಯತೊಡಗಿತು. ಜಪಾನು ೨೫-೧೨-೪೧ಕ್ಕೆ ಹಾಂಗಕಾಂಗವನ್ನು ವಶಪಡಿಸಿಕೊಂಡಿತು. ೧೫-೨-೪೨ಕ್ಕೆ ಸಿಂಗಪೂರನ್ನು ಕಬಳಿಸಿತು. ಮಾರ್ಚ ೭ಕ್ಕೆ ಜಾವಾದಲ್ಲಿಯ ಬಾಂಡುಂಗನ್ನು ವಶಪಡಿಸಿಕೊಂಡಿತು. ಮರುದಿನ ಅಂದರೆ ೮ನೆ ಮಾರ್ಚಕ್ಕೆ ರಂಗೂನ ಬಿದ್ದಿತು. ಎಪ್ರಿಲ್ ೯ಕ್ಕೆ ಬಟಾನ, ೩೦ ಎಪ್ರಿಲಕ್ಕೆ ಲಾಶಿಯೋ ಮತ್ತು ಮೇ ಎರಡನೇ ವಾರದಲ್ಲಿ ಸಂಪೂರ್ಣ ಬರ್ಮಾ. ಹೀಗೆ ಒಂದರಹಿಂದೊಂದು ಆಗ್ನೇಯ ಏಶಿಯಾದ ದೇಶಗಳು ಪಟಪಟನೇ ಜಪಾನದ ಕೈಗೆ ಬಿದ್ದವು. ಜಪಾನು ಬರ್ಮಾದ ಮೇಲೆ ದಾಳಿ ಮಾಡಿದಾಗ, ಅಲ್ಲಿ ಮಿತ್ರ ರಾಷ್ಟ್ರಗಳ ಎರಡು ಡಿವ್ಹಿಜನ್ನುಗಳು ಇದ್ದವು. ೧೭ ನೇ ಇಂಡಿಯನ್ ಡಿವ್ಹಿಜನ್ನು ಮತ್ತು ೧ನೇ ಬರ್ಮಾ ಡಿವ್ಹಿಜನ್- ಎರಡೂ ಡಿವ್ಹಿಜನ್ನುಗಳ ಒಟ್ಟು ಸೈನಿಕರ ಸಂಖ್ಯೆ ೨೫,೦೦೦ ವಿದ್ದಿತು. ಇಂಡಿಯನ್ ಡಿವ್ಹಿಜನ್ನಿನಲ್ಲಿ ೭೦೦೦ ಭಾರತೀಯ ಸೈನಿಕರಿದ್ದರು. ಬರ್ಮಾ ಡಿವ್ಹಿಜನ್‌ನಲ್ಲಿಯೂ ಕೆಲವು ಭಾರತೀಯರು, ಗುರ್ಖಾ, ಕಚಿನ್‌ರು, ಕರೇನ್‌ರು, ಚಿನ್ನರು ಮತ್ತು ಅಲ್ಪಸಂಖ್ಯೆಯಲ್ಲಿ ಶಾನ್‌ರು ಮತ್ತು ಬರ್ಮೀಯರು ಇದ್ದರು. ಈ ಎರಡೂ ಡಿವ್ಹಿಜನ್ನುಗಳಿಗೆ ಸಾಕಷ್ಟು ಯುದ್ಧಸಾಮುಗ್ರಿಗಳು ಸರಿಯಾದ ವೇಳೆಗೆ ಪೂರೈಸುವದು ಸಾಧ್ಯವಾಗದ್ದರಿಂದ ಬರ್ಮಾ ನಮ್ಮ ಕೈಬಿಟ್ಟಿತೆಂದು ಮಿತ್ರರಾಷ್ಟ್ರಗಳು ಕಾರಣವನ್ನು ಕೊಟ್ಟವು.

ಬರ್ಮಾದ ಒಳಗಿನ ಪರಿಸ್ಥಿತಿ ಕೊಂಚ ವಿಚಿತ್ರವಾಗಿತ್ತು. ಬರ್ಮಾ ಡಿಸ್ಟ್ರಿಜನ್ನಿನಲ್ಲಿ ಅತ್ಯಲ್ಪ ಪ್ರಮಾಣದಲ್ಲಿ ಬರ್ಮೀಯರು ಇದ್ದರು ಎಂಬ ಮಾತಿನತ್ತ ವಿಶೇಷ ಗಮನ ಕೊಡಬೇಕಾಗುವದು. ಬರ್ಮಾದ ಒಟ್ಟು ಜನಸಂಖ್ಯೆಯ ಅರ್ಧಕ್ಕಿಂತಲೂ ಹೆಚ್ಚು ಜನ ಬರ್ಮೀಯರಿದ್ದೂ--ಅವರೇ ಅತ್ಯಲ್ಪ ಪ್ರಮಾಣದಲ್ಲಿ ಸೈನಿಕರಾಗಿ ಬ್ರಿಟಿಶರಿಗೆ ಬೆಂಬಲ ನೀಡಿದ ಮಾತಿನಲ್ಲಿ ಬರ್ಮಾದ ಒಳಪರಿಸ್ಥಿತಿಯ ಚಿತ್ರ ಕಾಣುವಂತಿದೆ. ಭಾರತದಲ್ಲಿಯಂತೆ ಬರ್ಮಾದಲ್ಲೂ ಕೂಡ ಒಂದು ಉದಾಸೀನ ಪರಿಸ್ಥಿತಿ ಪಸರಿಸಿತ್ತು ಈ ಒಡೆಯನಿಗಾಗಿ ಹೋರಾಡಿ ಮಡಿಯಬೇಕೇಕೆ? ಒಡೆಯ ಯಾವನಾದರೂ ಏನು? ತಾವು ಗುಲಾಮರಾಗಿಯೇ ಉಳಿಯಬೇಕಲ್ಲವೇ? ಎಂಬ ಸಹಜ ಮನೋವೃತ್ತಿ ಬರ್ಮೀಯರನ್ನು ವ್ಯಾಪಿಸಿತ್ತು. ಮೇಲಾಗಿ ಬ್ರಿಟಿಶರ ಆಳಿಕೆಯನ್ನು ಮೇಲಿಂದಮೇಲೆ, ವಿರೋಧಿಸುತ್ತಿದ್ದ ಬರ್ಮೀಯರಲ್ಲಿ ಅವರ ಪರವಾಗಿ ಮನಮುಟ್ಟಿ ಹೋರಾಡುವ ವಿಚಾರ ಬರುವದಾದರೂ ಹೇಗೆ. ತದ್ವಿರುದ್ಧ ಕೆಲ ಬರ್ಮೀಯರು ಜಪಾನವನ್ನು ಸ್ವಾಗತಿಸುವದಕ್ಕಾಗಿ ಒಳಗಿಂದೊಳಗೇ ಸಿದ್ಧತೆ ನಡೆಸಿದ್ದರು. ಜಪಾನು ಎಷ್ಟಾದರೂ ಪೌರ್ವಾತ್ಯ ರಾಷ್ಟ್ರ. ಅದೂ ಬೌದ್ಧಧರ್ಮೀಯ ದೇಶ–ಮೇಲಾಗಿ ನಮಗೆ ಸ್ವಾತಂತ್ರ ನೀಡುವ ಆಶ್ವಾಸನ ಅದು ಗೌಪ್ಯವಾಗಿ ಕಳಿಸುತ್ತಿದೆ. ಇವೇ ಮುಂತಾದ ಕಾರಣಗಳನ್ನು ಬರ್ಮೀಯರು ಕೊಡುತ್ತಿದ್ದರು. ಬ್ರಿಟಿಶರಿಗೆ ಈ ಪರಿಸ್ಥಿತಿಯ ಸಂಪೂರ್ಣ ಅರಿವು ಇದ್ದಿತು. ಆದಕ್ಕೆಂತಲೇ ಅವರು ಈ ದ್ವಿತೀಯ ಮಹಾ ಯುದ್ಧದಲ್ಲಿ ಬರ್ಮೀಯರಮೇಲೆ ವಿಶ್ವಾಸವನ್ನಿಡಲಿಲ್ಲ, ಅದಕ್ಕೆ ಅನೇಕ ನಿದರ್ಶನಗಳೂ ಇವೆ. ಅವರು ಬರ್ಮಾದಲ್ಲಿಯ ಅನೇಕ ಅಲ್ಪ ಸಂಖ್ಯಾಕರ ನೆರವನ್ನು ಪಡೆದರು. ಅವರೇ ಕರೆನ್ಸ–ಶಾನ್ಸ್–ಚಿನ್ಸ–ಕಚಿನ್ಸ ಮತ್ತು ಆರಾಕಾನೀ ಮುಸ್ಲಿಂರು. ಈ ಅಲ್ಪ ಸಂಖ್ಯಾಕರು ಸಂಪೂರ್ಣ ಮನಸ್ಸಿನಿಂದ ಬ್ರಿಟಿಶರ ಪರವಾಗಿ ಹೋರಾಡಿದರು. ಬರ್ಮಾದಲ್ಲಿ ಬ್ರಿಟಿಶರ ಅಸ್ತಿತ್ವವನ್ನು ಮನವಾರೆ ಬಯಸಿದವರೂ ಅವರೇ. ಬರ್ಮಾವನ್ನು ಬ್ರಿಟಿಶರು ಬಿಟ್ಟುಹೋದರೆ ಅದರ ಆಡಳಿತ ಬಹು ಸಂಖ್ಯಾಕರಾದ ಬರ್ಮೀಯರ ಕೈಯಲ್ಲಿ ಹೋಗಿ, ಅಲ್ಪ ಸಂಖ್ಯಾಕರಾದ ತಮಗೆ ತೊಂದರೆಯಾಗಬಹುದೆಂಬ ಬಲವಾದ ಅಂಜಿಕೆ ಇವರನ್ನು ಕಬಳಿಸಿತ್ತು. ಆದಕ್ಕಂತಲೇ ಅಲ್ಪ ಸಂಖ್ಯಾಕರ ಕೈವಾರಿ (?) ಬ್ರಿಟಿಶರಿಗೆ ಅವರೂ ಸಂಪೂರ್ಣವಾಗಿ ಸಹಾಯ ನೀಡಿದ್ದರು.

ಆದರೂ ಆಗುವ ಕಾರ್ಯ ನಡದೇಹೋಯಿತು. ಬರ್ಮಾದಲ್ಲಿ ಜಪಾನೀ ಸೈನಿಕರು ಪ್ರವೇಶಿಸಿದ ದಿನ-- ಆ ಸೈನ್ಯದ ಕಮಾಂಡರ ಹೊರಡಿಸಿದ ಜಾಹೀರ ನಾಮೆ ಕೆಳಗಿನಂತಿತ್ತು.

"To

The Dear 15 Million people of Burma:

"Nippon troops have entered Burma to eliminate the influence of Britain, which have been exploiting and oppressing the people of Burma for 100 years....

The Burmese are an oriental race like the Japanese and are ardent Buddhist devotees. Inasmuch as Nippon troops advanced to Burma for liberting the people in Burma they should co-operate sincerely with Nippon regardless of their status or profession.

The Japanese Army will regard whosoever co-operates with Nippon as Nippon's friend....

On the contrary, those who resist the Nippon troops or those who inter-fere with their military movements shall be regarded as the enemies of East Asia and shall be subjected to severe punishment."

( "ಸ್ನೇಹಾಂಕಿತ ೧೫ ಕೋಟಿ ಬರ್ಮಾದ ಜನರೇ ;

ತಮ್ಮ ಸ್ವಾರ್ಥ ಸಾಧಿಸುವ ಉದ್ದೇಶದಿಂದ ನೂರಾರು ವರುಷಗಳಿಂದ ನಿಮ್ಮ ಮೇಲೆ ದಬ್ಬಾಳಿಕೆ ನಡೆಸುತ್ತಿದ್ದ ಬ್ರಿಟಿಶರ ಪ್ರಭುತ್ವವನ್ನು ಕಿತ್ತೊಗೆಯುವ ದರ ಸಲುವಾಗಿ, ನಿಪ್ಪೋನ ಸೈನಿಕರು ನಿಮ್ಮ ದೇಶದಲ್ಲಿ ಪ್ರವೇಶಿಸಿದ್ದಾರೆ.

ಬರ್ಮೀಯರೂ ಜಪಾನಿಗಳಂತೆ ಪೌರ್ವಾತ್ಯ ಜನಾಂಗದವರಾಗಿದ್ದಾರೆ. ಮತ್ತು ಬರ್ಮೀಯರೂ ಜಪಾನಿಗಳಂತೆ ಬೌದ್ಧ ಧರ್ಮದಲ್ಲಿ ಅಪಾರ ನಂಬಿಕೆ

ಯುಳ್ಳವರಾಗಿದ್ದಾರೆ. ಜಪಾನಿ ಸೈನಿಕರು ಬರ್ಮೀಯರನ್ನು ದಾಸ್ಯದ ಬಂಧನದಿಂದ ಮುಕ್ತಿಗೊಳಿಸಲು ಹೋರಾಡಿದ್ದುದರಿಂದ, ಪ್ರತಿ ಬರ್ಮೀಯನೂ ಪ್ರಾಮಾಣಿಕತನದಿಂದ ಜಪಾನದೊಡನೇ ಸಹಕರಿಸಬೇಕು.

ಯಾವನು ನಮ್ಮೊಡನೇ ಸಂಪೂರ್ಣ ಮನಸ್ಸಿನಿಂದ ಸಹಕರಿಸುವನೋ ಅವನನ್ನು ಜಪಾನ್ ರಾಷ್ಟ್ರವು ತನ್ನ ಮಿತ್ರನೆಂದು ತಿಳಿಯುವದು.

ತದ್ವಿರುದ್ಧವಾಗಿ ಯಾವನು ನಮ್ಮನ್ನು ವಿರೋಧಿಸುವನೋ ಅಥವಾ ನಮ್ಮ ಸೈನಿಕ ಚಲನವಲನಗಳಲ್ಲಿ ವ್ಯತ್ಯಯ ತರುವನೋ ಅವನನ್ನು ಪೂರ್ವ ಏಶಿಯಾದ ವೈರಿ ಎಂದು ಎಣಿಸಿ, ಘೋರ ಶಿಕ್ಷೆಯಿಂದ ದಂಡಿಸಲಾಗುವದು." )

ಜಪಾನು ಆನಂತರ ಪ್ರತಿಯೊಂದು ಜಿಲ್ಲೆಗೆ ತನ್ನ ಗವ್ಹರ್ನರರನ್ನು ನೇಮಿಸಿತು. ೧೯೪೩ ಅಗಸ್ಟ ೧ ರಿಂದ-- ಡಾಕ್ಟರ ಬಾ. ಮಾ ( ಬರ್ಮಿ ) ರವರನ್ನು ಬರ್ಮಾದ ಚೀಫ್ ಅಡ್ಮಿನಿಸ್ಟ್ರೇಟರ ಎಂದು ನೇಮಿಸಿತು. ಒಂದು ಒಪ್ಪಂದವನ್ನು ಬರ್ಮಾದ ಕೂಡ ಮಾಡಿಕೊಂಡಿತು. ಒಪ್ಪಂದದ ಕರಾರುಗಳು ಕೆಳಗಿನಂತಿದ್ದವು.

(1) Burma is to pay an indemnity of Rs. 3000 for every Japanese killed in Burma.

(2) For 10 years Japan will take all royalties on the natural resources of Burma.

(3) For 15 years Japanese and Sayamese goods will enter Burma duty free.

(4) All property left by Indians and other foreigners is expropriated to the state.

(5) No Indian or other foreigner may enter Burma by sea or land.

(6) 1000 Burmans are to be sent each year to Japan for Education.

(7) Burma is prohibited from signing a trade agreement with any other country.

(8) Japan will supply all arms.

[ (೧) ಬರ್ಮಾದೇಶದಲ್ಲಿ ಜಪಾನೀ ಸೈನಿಕನ ಕೊಲೆಯಾದಲ್ಲಿ ಒಬ್ಬ ಸೈನಿಕನ ಕೊಲೆಗಾಗಿ ಬರ್ಮಾ ಸರಕಾರವು ೩೦೦೦ ರೂಪಾಯಿಗಳ ದಂಡವನ್ನು ಜಪಾನಕ್ಕೆ ಕೊಡಬೇಕು.

(೨) ೧೦ ವರುಷಗಳವರೆಗೆ ಜಪಾನವು-ಬರ್ಮಾದಲ್ಲಿಯ ಉತ್ಪನ್ನಗಳ ಮೇಲಿನ ಕರವನ್ನು ತೆಗೆದುಕೊಳ್ಳುವದು.

(೩) ೧೫ ವರುಷಗಳವರೆಗೆ ಜಪಾನೀ ಮತ್ತು ಸಯಾಮೀ ಸರಕಗಳು ಕರವಿಲ್ಲದೇ ಬರ್ಮಾದೇಶದಲ್ಲಿ ಪ್ರವೇಶವನ್ನು ಪಡೆಯುವವು.

(೪) ಹಿಂದೀಯರು ಅಥವಾ ಮತ್ತಿತರ ಪರದೇಶದವರು ಬರ್ಮಾದಲ್ಲಿ ಬಿಟ್ಟು ಹೋದಂಥ ಆಸ್ತಿಯನ್ನು, ಬರ್ಮಾ ಸರಕಾರ ವಶಪಡಿಸಿಕೊಳ್ಳಬೇಕು.

(೫) ಯಾವದೇ ಭಾರತೀಯ ಅಥವಾ ಪರದೇಶದವರು ಬರ್ಮಾದಲ್ಲಿ ನೆಲ ಅಥವಾ ಜಲ ಮಾರ್ಗವಾಗಿ ಪ್ರವೇಶಿಸಲಾರ.

(೬) ೧೦೦೦ ಬರ್ಮೀಯರನ್ನು ಪ್ರತಿವರುಷ ಜಪಾನಕ್ಕೆ ಹೆಚ್ಚಿನ ಶಿಕ್ಷಣವನ್ನು ಪಡೆಯುವದಕ್ಕೋಸ್ಕರ ಕಳಿಸಲಾಗುವದು.

(೭) ಬರ್ಮಾ ಸರಕಾರವು ಮತ್ತಿತರ ದೇಶಗಳೊಡನೆ ವಾಣಿಜ್ಯ ಒಪ್ಪಂದವನ್ನು ಮಾಡಿಕೊಳ್ಳುವಂತಿಲ್ಲ.

(೮) ಜಪಾನು ಬರ್ಮಾಕ್ಕೆ ಯುದ್ಧಾಸ್ತ್ರಗಳನ್ನು ಪೂರೈಸುವದು. ]

ಮರುವರುಷವೇ ಬರ್ಮಾಕ್ಕೆ ಸ್ವಾತಂತ್ರ್ಯವನ್ನು ಜಪಾನು ಕೊಡ ಮಾಡಿತಾದರೂ (೧-೮-೧೯೪೩) ಈ ಒಪ್ಪಂದದ ಕರಾರುಗಳು ಹಾಗೆಯೇ ಉಳಿದುಕೊಂಡುವು. ೧-೮-೪೩ ನೇ ದಿನ ಡಾ. ಬಾ ಮಾರವರನ್ನು ಬರ್ಮಾದ ಸರ್ವಾಧಿಕಾರಿ ಎಂದು ನೇಮಿಸಿ ಸ್ವಾತಂತ್ರ್ಯ(?) ವನ್ನು ದಯಪಾಲಿಸಿತು. ಅಂದಿನಿಂದ ಬರ್ಮಾ-ಜಪಾನ ಸ್ಥಾಪಿತ “Co-prosperity sphere”ದ ಸದಸ್ಯ ರಾಷ್ಟ್ರವಾಯಿತು. ಜಪಾನೀಯರಿಂದ ಸ್ಥಾಪಿತವಾದ— ಬರ್ಮಾದ ಸ್ವತಂತ್ರ ಕ್ಯಾಬಿನೇಟ— ಸದಸ್ಯರಲ್ಲಿ ಬ್ರಿಟಿಶರ ಆಡಳಿತದಲ್ಲಿಯ ಕೆಲ ಅಧಿಕಾರಿಗಳೂ ಇದ್ದರು. ಅವರಲ್ಲಿಯ ಕೆಲ ಪ್ರಮುಖರಾದವರೆಂದರೆ Sir San C. Po (ಕರೇನ್ ಕ್ರಿಶ್ಚಿಯನ್ ಮುಂದಾಳು), Sir U. Thwin, Sir Mya Bu, Sir Maung Maung Gyi ಮುಂತಾದವರು.

Dr. Ba Baw, Dr. Thein Maung, U. Aye and U. Ba Thi ಮುಂತಾದವರು ಬ್ರಿಟಿಶರಾಡಳಿತದಲ್ಲಿ ಕ್ಯಾಬಿನೇಟ ಮುಂತ್ರಿಗಳಾಗಿದ್ದರು.

*  *  *  *

## ಜನರಲ್ ವಿಂಗ್ಟೆಯುವರ ಗುಪ್ತ ದಳ

ಇಂಫಾಲದಲ್ಲಿದ್ದಾಗ ಬರ್ಮಾದಲ್ಲಿ ಗೌಪ್ಯವಾಗಿ ಪ್ರವೇಶಿಸಿ, ಅಲ್ಲಿಯ ಕೆಲವು ಸುದ್ದಿಗಳನ್ನು ಈ ಒದಿಗೆ ಕಳಿಸಲಾಗುತ್ತಿತ್ತು. ಈ ಚಟುವಟಿಕೆಗಳ ಸುದ್ದಿಗಳನ್ನು ಬಹಿರಂಗಪಡಿಸಲಾಗುತ್ತಿದ್ದಿಲ್ಲ. ಆದರೂ ಕೆಲಕೆಲವು ಸುದ್ದಿಗಳು ಸೈನಿಕರ ಕಿವಿಗಳನ್ನು ತಲುಪುತ್ತಲೇ ಇದ್ದವು. ವಿಂಗ್ಟೆಯುವರ ಇಂಥದೊಂದು ಪಡೆಯ ಪ್ರಮುಖನಾಗಿ ಬರ್ಮಾ ಪ್ರವೇಶಿಸಿ ಒಂದು ಸೇತುವೆಯನ್ನು ಹಾಳು ಮಾಡಿ ಬಂದ, ಮೇಜರ ಫರ್ಗ್ಯುಸನ್ ತಮ್ಮ ಸಾಹಸ ಕತೆಯನ್ನು ಬರೆದರು. ಆ ಸತ್ಯಕತೆ ಕೇಳಿದಮೇಲೆ ಗೋರಿಲ್ಲಾದಳದ ರಣರಂಗದ ಚಟುವಟಿಕೆಗಳು ಹೇಗೆ ಇರುತ್ತವೆ ಎಂಬುದರ ಕಲ್ಪನೆ ಬರುವದು.

## ಆಧುನಿಕ ವಿಶ್ವಾಮಿತ್ರ

ಪುರಾಣಕಾಲದ ಕತೆಯೊಂದಿದೆ. ಭಯಾನಕ ಬರಗಾಲ ಬಂದೊದಗಿದಾಗ ಗಾಯತ್ರೀಮಂತ್ರದ ದೃಷ್ಟಾರ ವಿಶ್ವಾಮಿತ್ರ ಹಸಿವೆಯಿಂದ ಬಳಲಿ ಬೆಂಡಾಗಿ ಕಂಗಾಲನಾಗಿ ಸತ್ತುಬಿದ್ದ ನಾಯಿಯ ಮಾಂಸವನ್ನು ತಿಂದನೆಂಬ ಕತೆಯನ್ನು ಕೇಳಿದ್ದೇವೆ. ಎಷ್ಟೋ ಜನ ಸುಧಾರಕರು ನಂಬದಿದ್ದರೂ ಅಂಥ ಪರಿಸ್ಥಿತಿ ಬಂದಾಗ ಇಂಥ ಘಟನೆಗಳು ಅವಾಸ್ತವವೆನಿಸಲಾರವು. ದ್ವಿತೀಯ ಮಹಾಯುದ್ಧದ ಸಮಯದಲ್ಲಿ ಇಂಥದೇ ಒಂದು ಘಟನೆ ನಡೆಯಿತು.

೧೯೪೩ರ ಜೂನ, ಜುಲೈ ತಿಂಗಳ ಸುಮಾರಿನ ಕಾಲ. ಬರ್ಮಾ ದೇಶ ಆಗಲೇ ಜಪಾನಿಗಳ ವಶವಾಗಿ ಹೋಗಿತ್ತು. ಅದನ್ನು ಮರಳಿ ತಮ್ಮ ವಶಕ್ಕೆ ತೆಗೆದುಕೊಳ್ಳಬೇಕೆಂದು ಮಿತ್ರರಾಷ್ಟ್ರಗಳು ಹಂಬಲಿಸುತ್ತಲಿದ್ದವು. ಶತ್ರು ಆಕ್ರಮಿತ ಪ್ರದೇಶದಲ್ಲಿ ಗೌಪ್ಯವಾಗಿ ಪ್ರವೇಶಿಸಿ ಕೆಲವು ಆಯಕಟ್ಟಿನ ಸ್ಥಳಗಳನ್ನು (ರೈಲು, ಸೇತುವೆ ಮುಂ.) ಹಾಳುಗೆಡವಿ, ಶತ್ರುಗಳ ಶಕ್ತಿಯನ್ನು ಕ್ಷೀಣ

ಗೊಳಿಸಿ ನಂತರ ಸೈನಿಕ ದಾಳಿಯನ್ನು ಪ್ರಾರಂಭಿಸುವದು ಆಧುನಿಕ ಯುದ್ಧದ ರೀತಿಯಾಗಿದೆ. ಬ್ರಿಗೇಡಿಯರ ವಿಂಗ್ಟೆ ಇವರು ಮೇಜರ ಫರ್ಗ್ಯೂಸನ್ ಇವರ ನೇತೃತ್ವದಲ್ಲಿ ಒಂದು ಸೈನ್ಯಪಡೆಯನ್ನು ಇಂಥ ಕೆಲಸಕ್ಕಾಗಿ ನಿರ್ಮಿಸಿದರು. ಈ ಪಡೆಯಲ್ಲಿ ೯ ಜನ ಬಿಳಿಯ ಅಧಿಕಾರಿಗಳು, ೮೦-೯೦ ಭಾರತೀಯ ಸೈನಿಕರು (ಹೆಚ್ಚಾಗಿ ಗುರ್ಖಾ ಸೈನಿಕರೇ) ಮತ್ತು ೩೮-೪೦ ಬಿಳಿಯ ಸೈನಿಕರು ಇದ್ದರು. ಈ ಪಡೆ ತನ್ನ ಜತೆಯಲ್ಲಿ ವಾಯರ್ಲೆಸ್ ಸೆಟ್, ಗ್ರೆನೇಡ್ಸ, ಗುಂಡು, ಮದ್ದು, ನಕಾಶೆಗಳು ಮತ್ತು ಡಾಯನೆಮಾ ಮುಂತಾದವುಗಳನ್ನು ತೆಗೆದುಕೊಂಡು "ಇಂಫಾಲ"ನ್ನು ಬಿಟ್ಟು ಬರ್ಮಾ ಗಡಿಯನ್ನು ಪ್ರವೇಶಿಸಿತು. ತಮ್ಮ ಜತೆಯಲ್ಲಿ ಕೆಲವು ಹೇಸರುಗತ್ತೆಗಳನ್ನೂ ಕರೆದೊಯ್ದರು. ಹೇಸರುಗತ್ತೆಗಳ ಸಹಾಯ ಅನಿವಾರ್ಯವಾಗಿತ್ತು. ಏಕೆಂದರೆ ಈ ಪಡೆಗೆ ಸರಿಯಾದ ದಾರಿಯಿಂದ ಮಾರ್ಗ ಕ್ರಮಿಸುವದು ಸಾಧ್ಯವಿರಲಿಲ್ಲ. ಏಕೆಂದರೆ ಅಂಥ ದಾರಿಗಳಲ್ಲೆಲ್ಲ ಶತ್ರುಗಳ ಸೈನಿಕರು ಸರ್ಪಕಾವಲನ್ನಿರಿಸಿದ್ದರು. ಆಂದಮೇಲೆ, ಅಡ್ಡ ಹಾದಿಯಿಂದಲೇ ಆದಷ್ಟು ಅಡವಿಯೊಳಗಿಂದ ಅದೂ ಕತ್ತಲಾದಮೇಲೆಯೇ ಮುನ್ನಡೆಯಬೇಕು. ಜತೆಯಲ್ಲಿ ಸಾಕಷ್ಟು ಸಾಮಾನುಗಳನ್ನು ಒಯ್ಯಬೇಕಾಗಿರುವದರಿಂದ ಹೇಸರು-ಗತ್ತೆಗಳ ಸಹಾಯ ಬೇಕೇಬೇಕಾಗುತ್ತದೆ. ಹೀಗೆ ಸಕಲ ಸನ್ನದ್ಧವಾಗಿ ಈ ಪಡೆ ಇಂಫಾಲ ಊರನ್ನು ಬಿಟ್ಟು ಬರ್ಮಾ ಗಡಿಯನ್ನು ಪ್ರವೇಶಿಸಿತು.

ಬರ್ಮಾದಲ್ಲಿ ಕೆಲವು ಅಂತರವನ್ನು ಕ್ರಮಿಸಿದನಂತರ ಚಿಂದ್ವಿನ್ ಹೊಳೆಯನ್ನು ಬಹು ಪ್ರಯಾಸದಿಂದ ದಾಟಿ, ಅಡವಿಯೊಳಗಿಂದಲೇ ಕತ್ತಲಲ್ಲಿಯೇ ನಡೆದು ತಾಂಗ್ಮಾವ್-ಪಿನಲೆಬು, ತಾತ್ಮಾವಿನ್ ಮೊದಲಾದ ಊರನ್ನು ಜಪಾನಿ ಸೈನಿಕರಿಲ್ಲದ ವೇಳೆ ಸಾಧಿಸಿ, ಸಂದರ್ಶಿಸಿತು. ನಂತರ ತಿಗ್ಯಾಂಗ್ ಹತ್ತಿರ ಇರಾವತಿ ಮಹಾ ಹೊಳೆಯನ್ನು ಸಾಹಸದಿಂದ ದಾಟಿ, ನಿರ್ದಿಷ್ಟ ಪಡಿಸಿದ ರೈಲು ಸೇತುವೆಯನ್ನು ಹಾಳುಗೆಡವಿದರು. ಈ ವರೆಗೆ ಇವರ ಆಹಾರದ ವಿಷಯವಾಗಿ ಏನು ಎಂಬ ಪ್ರಶ್ನೆ? ಗಡಿಪ್ರವೇಶದ ಮುಂಚೆ ೫-೬ ದಿನಗಳ ರೇಶನ್ ತೆಗೆದುಕೊಂಡೇ ಪಡೆಯು ಹೊರಟಿತ್ತು. ಆ ಆಹಾರ ಮುಗಿದಾಕ್ಷಣ ಇಂಫಾಲದ ಹೆಡ್‌ಕ್ವಾರ್ಟರಿಗೆ ಇಂಥಿಂಥ ಸ್ಥಳದಲ್ಲಿ ಮ್ಯಾಪ್‌ರೆಫರನ್ಸ ನಂಬರ ಕೊಟ್ಟು ಅಲ್ಲಿ ರೇಶನ್ ಒಗೆಯಲು ವಿನಂತಿಸಿಕೊಳ್ಳಲಾಗುತ್ತಿತ್ತು. ಕತ್ತಲಲ್ಲಿ ಸರಿಯಾದ ಸ್ಥಳದಲ್ಲಿ ಆರ್. ಎ. ಎಫ್. ಅಥವಾ ಐ. ಎ. ಎಫ್. ವಿಮಾನಗಳು ಪ್ಯಾರಾಚೂಟಗಳಿಗೆ ರೇಶನ್ ಡಬ್ಬಿಗಳನ್ನು ಕಟ್ಟಿ ಚೆಲ್ಲಿಬಿಡುತ್ತಿದ್ದವು. ಆ

ಡಬ್ಬಿಗಳಲ್ಲಿರುವದು ಡ್ರಾಯ್ ರೇಶನ್. ಅಂದರೆ ಹಣ್ಣಿನ ರಸದ ಡಬ್ಬಿಗಳು. ಚಾಕಲೇಟು, ಬಿಸ್ಕಿಟ್ಟುಗಳು, ಹಜಾಮತಿ ಸೆಟ್ಟು, ಟೀಜ ರವ್ ಬಾಟಲಿಗಳು, ವ್ಹಿಟಾಮಿನ್ ಗುಳಿಗೆಗಳು, ಕೆಲವೊಂದು ಕಾದಂಬರಿಗಳು, ಮಾಸಪತ್ರಿಕೆಗಳು ಇತ್ಯಾದಿ. ಒಂದೊಂದು ಸಲ ಬೆಳ್ಳೀರೂಪಾಯಿಗಳ ಚೀಲ. (ಏಕೆಂದರೆ ಹಳ್ಳಿಯಲ್ಲಿ ಏನಾದರೂ ಖರೀದಿ ಮಾಡುವ ಪ್ರಸಂಗ ಬಿದ್ದರೆ ಇರಲೆಂದು, ನೋಟುಗಳಿಗೆ ಯಾರೂ ಬೆಲೆಯನ್ನೇ ಕೊಡುತ್ತಿರಲಿಲ್ಲ.) ರೇಶನ್ ಡಬ್ಬಿಗಳು ಬಿದ್ದ ಸ್ಥಳಕ್ಕೆ ಹೋಗಿ ಅವುಗಳನ್ನು ಕೂಡಿಸಿಕೊಂಡು ಮುಂದಕ್ಕೆ ಪ್ರಯಾಣ ಬೆಳೆಸುತ್ತಿದ್ದರು. ಒಂದು ಸಲ ವೈಮಾನಿಕನ ತಪ್ಪಿನಿಂದ ಈ ಡಬ್ಬಿಗಳು ಶತ್ರು ಸೈನಿಕರಿದ್ದ ಸ್ಥಳದ ಹತ್ತಿರವೇ ಬಿದ್ದುಬಿಟ್ಟಿದ್ದವು. ಅವುಗಳನ್ನು ಆರಿಸಿಕೊಂಡು ಬರಲು ನಿಯುಕ್ತನಾದ ಅಧಿಕಾರಿಯೂ ಕೊಂಚ ಬೇಜವಾಬುದಾರನಾಗಿ ವರ್ತಿಸಿದುದರ ಮೂಲಕ, ಅವು ಶತ್ರುಸೈನಿಕರ ವಶವಾಗಿ ಹೋದವು. ಇದರಿಂದ ಗೌಪ್ಯ ಸ್ಫೋಟವಾಗಿ ಶತ್ರುಗಳು ಈ ದಳದ ಬೆನ್ನು ಹತ್ತುವಂತಾಯಿತು.

ಅವರು ಅವನ್ನು ಚೆನ್ನಾಗಿ ಪರಿಶೀಲಿಸಿ ಅದರಲ್ಲಿದ್ದ ಮಾಸಪತ್ರಿಕೆಗಳ ಭಾಷೆಯಿಂದ ಈ ಗೌಪ್ಯ ದಳದಲ್ಲಿ ಆಂಗ್ಲರೂ ಭಾರತೀಯ ಸೈನಿಕರೂ ಇರಲೇಬೇಕೆಂದು ಖಚಿತಪಡಿಸಿಕೊಂಡರು. ಇದರಮೇಲಿಂದ, ಒಂದು ಪಡೆ, ಕಳ್ಳತನದಿಂದ ಒಳಗೆ ಪ್ರವೇಶ ಮಾಡಿದೆ ಎಂಬ ಮಾತಂತೂ ಅವರಿಗೆ ಖಾತ್ರಿಯಾಯಿತು. ಆದರೆ ಅಡವಿಯಲ್ಲಿ ಹುಡುಕುವ ಬಗೆ ಹೇಗೆ? ಅಂತೂ ಮರುದಿನ ಜಪಾನೀ ವಿಮಾನ ಆ ಅಡವಿಯಲ್ಲಿ ೮-೧೦ ಕಡೆ ಕರಪತ್ರಗಳನ್ನು ಚೆಲ್ಲಿ ಹೋಯಿತು. ಆ ಕರಪತ್ರ ಇಂಗ್ಲೀಷ ಮತ್ತು ಉರ್ದುವಿನಲ್ಲಿ ಛಾಪಿಸಲಾಗಿತ್ತು. ಆ ಇಂಗ್ಲೀಷ ಕರಪತ್ರದ ನಮೂನೆಯನ್ನು ಅವಗಾಹನೆಗಾಗಿ ಕೆಳಗೆ ಕೊಡಲಾಗಿದೆ.

"To

The pitiable Anglo-Indian Soldiery,

"Your forces have been utterly destroyed in the battle of third March 1943 and not a man has been able to recross the Chindwin. The

powerful Imperial Army of Nippon* is all around you, and you cannot possibly escape. Do not again trust your brutal and selfish British officers, who will leave you to starve in the jungles as they did last year. Come to the nearest Nippon Soldier with this leaflet in your hand and he will treat you well."

(ಕರುಣಾಜನಕ ಸ್ಥಿತಿಯಲ್ಲಿದ್ದ ಆಂಗ್ಲ ಹಾಗೂ ಭಾರತೀಯ ಸೈನಿಕರೇ,

೧೯೪೩ ರ ಮಾರ್ಚ ಮೂರನೇ ದಿನಾಂಕ ನಡೆದ ಕಾಳಗದಲ್ಲಿ ನಿಮ್ಮ ಸೈನ್ಯಪಡೆಗಳು ಸೋತು ನುಚ್ಚುನೂರಾಗಿ ಹೋಗಿವೆ. ಒಬ್ಬನಾದರೂ ಸೈನಿಕ ಚಿಂದ್ವಿನ ನದಿಯನ್ನು ಮರಳಿ ದಾಟಲು ಸಮರ್ಥನಾಗಿಲ್ಲ. ನಿಪ್ಪೋನ ದೇಶದ ಬಲಾಢ್ಯ ಸೈನಿಕರು ನಿಮ್ಮ ಸುತ್ತಲೂ ಪಸರಿಸಿದ್ದಾರೆ. ನೀವು ಇಲ್ಲಿಂದ ಪಾರಾಗಿ ಹೋಗುವದು ಬಹುಶಃ ಸಾಧ್ಯವಿಲ್ಲ. ಕ್ರೂರ ಮತ್ತು ಸ್ವಾರ್ಥಿಗಳಾದಂಥ ಇಂಗ್ಲೀಷ ಅಧಿಕಾರಿಗಳನ್ನು ಈಗಲಾದರೂ ನಂಬಬೇಡಿರಿ. ಆದಕಾರಣ ಈ ಕರಪತ್ರವನ್ನು ಕೈಯಲ್ಲಿ ಹಿಡಿದುಕೊಂಡು ಹೊರಗೆ ಬಂದು, ಹತ್ತಿರವಿದ್ದ ಯಾವುದೇ ಜಪಾನೀ ಸೈನಿಕನಿಗೆ ಶರಣು ಬರಬೇಕು. ಆತನು ನಿಮ್ಮನ್ನು ಒಳ್ಳೆಯ ರೀತಿಯಿಂದ ನಡೆಸಿಕೊಳ್ಳುವನು.)

ಕೆಲ ದಿನಗಳ ನಂತರ ರೈಲು ಸೇತುವೆ ಹಾಳುಗೆಡವಿದ ಸುದ್ದಿಯಿಂದ ಜಪಾನಿ ಸೈನಿಕರು ಕಿಡಿ ಕಿಡಿಯಾದರು. ಈ ಕೆಲಸ ಮುಗಿಸಿ ಈ ಪಡೆ ಪುನಃ ಮರಳಿ ಹೋಗುವದು ಖಂಡಿತ ಎಂದು, ಜಪಾನೀ ಸೈನಿಕರು ಇರಾವತಿ ದಂಡೆಯಲ್ಲೆಲ್ಲ ಭದ್ರವಾದ ಕಾವಲನ್ನಿರಿಸಿತು. ಮೇಜರ ಫರ್ಗ್ಯುಸನ್ ಪಡೆಗೆ ಇದರ ಸುಳಿವು ಹತ್ತದೆ ಹೋಗಲಿಲ್ಲ. ಆದಕ್ಕಾಗಿ ಬಂದ ದಾರಿಯಿಂದ ಮರಳದೆ (ಅಂದರೆ ಸೀದಾ ಪಶ್ಚಿಮಕ್ಕೆ ಹೋಗದೆ) ಉತ್ತರ ದಿಕ್ಕಿನಲ್ಲಿ ಕೆಲವು ಅಂತರ ವನ್ನು ಕ್ರಮಿಸಿ ನಂತರ ಪಶ್ಚಿಮದ ಕಡೆಗೆ ಹೊರಳುವದೆಂದು ನಿರ್ಧರಿಸಿತು.

---

* ಜಪಾನಿಗಳು ತಮ್ಮ ದೇಶವನ್ನು "ನಿಪ್ಪೋನ" ಎಂತಲೇ ಕರೆಯುತ್ತಾರೆ. ನಿಪ್ಪೋನ ಎಂದರೆ ಪೂರ್ವದೇಶದ ರಾಷ್ಟ್ರ ಅಥವಾ ಸೂರ್ಯ ಮೂಡುವ ಸ್ಥಾನದಲ್ಲಿದ್ದ ದೇಶ ಎಂದು.

ಈಗಾಗಲೇ ಪಡೆ ಶೋಚನೀಯ ಸ್ಥಿತಿಗೆ ಬಂದಿತ್ತು. ಉಡುಪು ಹೊಲಸಾಗಿತ್ತು. ಬೂಟ್ಸು ರಿಪೇರಿ ಮಾಡಿಸಿಕೊಳ್ಳುವ ಸ್ಥಿತಿಗೆ ಬಂದಿದ್ದವು. ಸೈನಿಕರೂ ಡ್ರಾಯ ರೇಶನಕ್ಕೆ ಬೇಸತ್ತಿದ್ದರು. ಹಾಕಲು ಬಟ್ಟೆ ಇಲ್ಲ. ಸೈನಿಕರ ಮೈಯಲ್ಲೆಲ್ಲ ಹೇನುಗಳು ತುಂಬಿದ್ದವು. ರಾತ್ರಿಯಲ್ಲಿ ಅಡವಿಯಲ್ಲಿಯೇ ಮಲಗಿಕೊಳ್ಳಬೇಕು. ಹೊದೆದುಕೊಂಡು ಮಲಗದಿದ್ದರೆ ಸೊಳ್ಳೆಗಳ ಕಾಟ, ಹೊದೆದುಕೊಂಡು ಮಲಗಿದರೆ ಒಳಗೆ ಹೇನುಗಳ ಕಾಟ. ಮರಳುವ ದಾರಿಯನ್ನು ಬದಲಿಸಿದುದರ ಮೂಲಕ ಈ ಪಡೆಗೆ ಮತ್ತೊಂದು ಹೊಳೆಯನ್ನು ದಾಟಬೇಕಾಯಿತು. ಆ ಹೊಳೆಯ ಹೆಸರು 'ಶಿವಲಿ'. ಆದರೆ ಅಲ್ಲಿಯೂ ಶತ್ರುಗಳ ಕಾವಲಿತ್ತು. ತಮ್ಮ ಜತೆಯಲ್ಲಿ ಒಯ್ದ ಹೇಸರುಗತ್ತೆಗಳನ್ನು ಮರಳಿ ಒಯ್ಯುವದೂ ತೊಂದರೆ ದಾಯಕವಾಗತೊಡಗಿತ್ತು. ಈ ಬಗ್ಗೆ ವಾಯರ್ಲೆಸ್ ಸೆಟ್ಟಿನಿಂದ ಮಾರ್ಗದರ್ಶನಕ್ಕಾಗಿ ಕೇಳಲು ಬ್ರಿಗೇಡ ಹೆಡ್‌ಕ್ವಾರ್ಟರಿನಿಂದ ಸೂಚನೆ ಬಂದಿತು— "ಹೇಸರು ಗತ್ತೆಗಳನ್ನೆಲ್ಲ ಏನೇನೂ ಸಪ್ಪಳವಿಲ್ಲದೆ ಕೊಂದುಬರಬೇಕು" ಎಂದು ಆದೇಶ ಬಂದಿತು. ತಾವು ಹಿಮ್ಮೆಟ್ಟಿ ಹೋಗುವಾಗ, ಒಯ್ಯಲು ಆಗದ ಸಾಮಾನು ಗಳನ್ನು ಸರಿಯಾದ ಸ್ಥಿತಿಯಲ್ಲಿ ಬಿಟ್ಟು ಹೋಗಬಾರದೆಂದು ಆಧುನಿಕ ಯುದ್ಧದ ಪದ್ಧತಿ. ಅವು ಶತ್ರುಗಳ ಕೈಗೆ ಸಿಲುಕಿ ಅದರಿಂದ ಶತ್ರುಶಕ್ತಿ ದ್ವಿಗುಣಿತವಾಗ ಬಾರದೆಂದು ಬ್ರಿಗೇಡ್ ಹೆಡ್ ಕ್ವಾರ್ಟರದ ಆದೇಶದ ಮೇರೆಗೆ, ಹೇಸರುಗತ್ತೆ ಗಳನ್ನು ಒಂದೊಂದಾಗಿ ಕೊಲ್ಲುವ ಉಪಕ್ರಮ ನಡೆಯಿತು. ಅವುಗಳನ್ನು ರಾಯಫಲ್ಲಿನಿಂದ ಕೊಲ್ಲುವಂತಿರಲಿಲ್ಲ. ಸಪ್ಪಳವಾಗಬಾರದು, ರಾಯಫಲದ ಸಪ್ಪಳದಿಂದ ಶತ್ರುಗಳಿಗೆ ಇವರ ಸ್ಥಾನ ಪರಿಚಯವಾಗುತ್ತದೆ. ಇನ್ನು ಒಂದೇ ಉಪಾಯ. ಅವುಗಳ ಕುತ್ತಿಗೆಯನ್ನು ಕೊಯ್ಯುವದು. ಒಂದೆರಡು ಹೇಸರು ಗತ್ತೆಗಳನ್ನು ಹಾಗೆಯೇ ಕೊಲ್ಲಲಾಯಿತು. ಆದರೆ ಅವುಗಳನ್ನು ಪ್ರೀತಿಯಿಂದ ಸಲುಹಿದ ಅಧಿಕಾರಿಯೊಬ್ಬ ಅತ್ತು ಹಾಗೆ ಕೊಲ್ಲಬಾರದೆಂದು ಪ್ರಾರ್ಥಿಸಿ ಕೊಂಡಾಗ ಹೊಸ ವಿಧಾನವನ್ನು ಕಂಡುಹಿಡಿದರು. ಒಂದು ತಗ್ಗಿನಲ್ಲಿ ಒಂದೊಂದೇ ಹೇಸರುಗತ್ತೆಯನ್ನು ಕರೆದುಕೊಂಡು ಹೋಗಿ ಅಲ್ಲಿ ಪಿಸ್ತೂಲಿನಿಂದ ಕೊಲ್ಲತೊಡಗಿದರು. ಅಂತೂ ಎಲ್ಲವನ್ನೂ ಮುಗಿಸಿ ಶೀವಲಿ ನದಿಯನ್ನು ದಾಟಿದರು. ಶೀವಲಿ ನದಿಯನ್ನು ದಾಟಿದ ನಂತರ ಹೆಚ್ಚಿನ ಗಂಡಾಂತರ ಕಾದಿತ್ತು. ಆಹಾರದ ಪೂರಯಿಕೆ ನಿಂತಿತು. ಪೂರಯಿಕೆ ಮಾಡಬಲ್ಲಷ್ಟು ಅಂತರದ ಹೊರಗೆ ಬಂದಿತ್ತು ಈ ಪಡೆ. ಇದ್ದ ಡ್ರಾಯರೇಶನ್ ತೀರುತ್ತ

ಬಂದಿತ್ತು. ಇಂಥ ಸ್ಥಿತಿಯಲ್ಲಿಯೇ ದಾಟಲು ಅಯೋಗ್ಯವಾದ ಸ್ಥಳದಲ್ಲಿ ಇರಾವತಿ ನದಿಯನ್ನು ದಾಟಬಯಸಿದರು. ಭರ್ತಿ ಮಧ್ಯರಾತ್ರಿಯ ಸಮಯದಲ್ಲಿ ಕೆಲವು ಹಳ್ಳಿಗರ ಡೋಣಿಗಳ ಆಧಾರದಿಂದ ಅರ್ಧ ಪ್ರವಾಹವನ್ನು ದಾಟಿ ಒಂದು ನಡುಗಡ್ಡೆಗೆ ಬಂದು ಮುಟ್ಟಿದರು. ಅದರ ಮುಂದಿನ ಪ್ರವಾಹ ಬಳ್ಳಿ ರಭಸದ್ದಾಗಿತ್ತು. ಹಳ್ಳಿಗರು ಅಲ್ಲಿ ಬರಲೊಪ್ಪಲಿಲ್ಲ. ಅಷ್ಟೇ ಅಲ್ಲ, ತಮ್ಮ ಡೋಣಿಗಳೊಂದಿಗೆ ಕತ್ತಲಲ್ಲಿ ಮಾಯವಾದರು. ಈ ನಡುಗಡ್ಡೆಯಿಂದ ಆಚೆಯ ದಂಡೆಯು ಹತ್ತಿರವೇ ಇದ್ದಿತು. ಆದರೆ ಪ್ರವಾಹದ ಸೆಳೆತ ಬಹಳವಿದ್ದಿತು. ಆ ನೀರಿನ ಆಳ ಹೇಳಿಕೊಳ್ಳುವಷ್ಟಿರಲಿಲ್ಲ. ಎಲ್ಲರೂ ಡೋಣಿಗಳ ಸಹಾಯವಿಲ್ಲದೇ ದಾಟುವದು ಎಂದು ನಿರ್ಧರಿಸಿದರು. ದಾಟುವಾಗ ೮-೧೦ ಜನ ಸೆಳೆತಕ್ಕೆ ಕೊಚ್ಚಿಕೊಂಡು ನಡೆದರು. ಅವರೆಲ್ಲ ಗುರ್ಖಾರೇ ಆಗಿದ್ದರು. ಅವರನ್ನು ಉಳಿಸುವ ಗೋಜಿಗೆ ಯಾವನೂ ಹೋಗಲಿಲ್ಲ. ಹೋಗುವಂತೆಯೂ ಇರಲಿಲ್ಲ. ಇದನ್ನು ನೋಡಿ ಕೆಲ ಸೈನಿಕರು ಆ ನಡುಗಡ್ಡೆಯಲ್ಲಿಯೇ ಉಳಿದರು. ಅಂತೂ ೭ ಜನ ಆಫೀಸರರು ೬೦-೬೫ ಜನ ಸೈನಿಕರು ಪಾರಾಗಿ ಆ ದಂಡೆಯನ್ನು ಹತ್ತಿ ಮುನ್ನಡೆದರು. ಹಿಂದೆ ಉಳಿದವರನ್ನೂ ಕೊಚ್ಚಿಕೊಂಡು ಹೋದವರನ್ನೂ ಅವರ ಪಾಡಿಗೇ ಬಿಟ್ಟು, ಈ ಪಡೆ ಅಡವಿಯೊಳಗಿಂದಲೇ ಪಶ್ಚಿಮಾಭಿಮುಖವಾಗಿ ಅಂದರೆ ಭಾರತಾಭಿಮುಖವಾಗಿ ಮಾರ್ಗ ಕ್ರಮಿಸತೊಡಗಿತು.

ಈ ಪಡೆ ತೀರ ಕ್ಷೀಣವಾಗಿತ್ತು. ತಿನ್ನಲು ಆಹಾರವೇ ಇಲ್ಲ, ನಡೆಯಲು ಕಾಲುಗಳೇ ಏಳದಂತಾದವು. ಅಧಿಕಾರಿಗಳಲ್ಲಿ ಲೆಫ್ಟನಂಟ ಡಂಕನ್ ಎಂಬುವರು ಒಂದು ನಾಯಿಯನ್ನು ಸಾಕಿದ್ದರು. ಆ ನಾಯಿಯ ಹೆಸರು "ಜ್ಯೂಡಿ". ಒಬ್ಬ ಅಧಿಕಾರಿಯ ಕಣ್ಣು ಈ ನಾಯಿಯ ಮೇಲೆ ಬಿದ್ದಿತು. "ಈ ನಾಯಿಯನ್ನು ಕೊಂದು ಅದರ ಮಾಂಸ ಬೇಯಿಸಿ ತಿನ್ನುವಾ" ಎಂದು ಸೂಚಿಸಿದ. ಡಂಕನ್ ಅದಕ್ಕೆ ಒಪ್ಪಲಿಲ್ಲ. ಮೇಲಾಗಿ ಆ ನಾಯಿಯ ಸುದೈವದಿಂದ ಅಲ್ಲಿಯೇ ಒಂದು ಕಾಡೆಮ್ಮೆ, ನೀರು ಕುಡಿಯಲು ಕೊಳ್ಳದ ಹತ್ತಿರ ಬಂದಿತ್ತು. ಆ ಎಮ್ಮೆಯನ್ನು ಕೊಂದು ಅದರ ಮಾಂಸ ಬೇಯಿಸಿ ತಿಂದರು. ಯುದ್ಧದ ಕಾಲದಲ್ಲಿ ನಡೆದ ಈ ಘಟನೆ ವಿಶ್ವಾಮಿತ್ರನ ಆಪದ್ಧರ್ಮದ ನೆನಪು ಮಾಡಿ ಕೊಡುತ್ತದೆ. ನಾಯಿಯನ್ನು ಅಂದು ಉಳಿಸಿದ ಅದರ ಒಡೆಯ ಡಂಕನ್ ಮಾತ್ರ ಭಾರತದ ಗಡಿಯನ್ನು ಮುಟ್ಟುವ ಮೊದಲೇ ಶತ್ರುಗಳ ಗುಂಡಿಗಾಹುತಿಯಾದ.

## ಜಪಾನೀ ಕವಿತೆ

ಬರ್ಮಾದಲ್ಲಿ ಕೊಲ್ಲಲ್ಪಟ್ಟ ಜಪಾನಿ ಸೈನಿಕನ ಜೇಬಿನಲ್ಲಿ ಹಸ್ತಲಿಖಿತ (ಇಂಗ್ಲೀಷಿನಲ್ಲಿ) ಕವಿತೆ ಸಿಕ್ಕಿತಂತೆ. ಅದರಲ್ಲಿ ಜಪಾನೀ ಸೈನಿಕನ ಮಹತ್ವಾಕಾಂಕ್ಷೆ ಹೇಗೆ ಮೇರೆಮೀರಿತ್ತೆಂಬುದು ವ್ಯಕ್ತವಾಗುತ್ತದೆ. ಈ ಕವಿತೆಯನ್ನು ನೋಡಿರಿ.

### "THE UNITY OF THE WORLD"

With rising sun died in the flood of red Blood,
Would that I could unite the World.
In the Ganges river flowing from the Himalayas,
The sons of Japan are fishing for crocodiles.
The London town swept clear of fog
The carp are flying high
The tower of London & the effiel tower,
Are look-out towers for the Japanese police.
Berlin to day & Moscow tomarrow
Then Snowy Siberia in the Emperor's hand
In the city of Chicago, free from gangs
Our grandsons raise monuments
to the loyal dead
When making waters from the great
wall of China
A rainbow appears on the Gobi desert.
If I should die, I shall gather the devils
At he river styx have a wrestling match.

## ಮತ್ತೆ ಬರ್ಮಾ ಕಾಳಗ

೧೯೪೩ ರ ಅಂತ್ಯದ ಸುಮಾರಿಗೆ ಪುನಃ ಮಿತ್ರ ರಾಷ್ಟ್ರಗಳು ಪೌರ್ವಾತ್ಯ ರಣರಂಗದತ್ತ ಹೆಚ್ಚಿನ ಗಮನವನ್ನು ಕೊಡಲಾರಂಭಿಸಿದರು. ಜನರಲ್ ವಾವೆಲ್,

ಜನರಲ್ ಆಚಿನ್‌ಲೆಕ್, ಜನರಲ್ ಸ್ಟಿಲವೆಲ್ಲ ಒಬ್ಬರಹಿಂದೊಬ್ಬರಂತೆ ಬರ್ಮಾ ಕಾಳಗದ ಮಹಾ ದಂಡನಾಯಕರಾಗಿ ಕೆಲಸ ಮಾಡಿ ಹಿಂದಕ್ಕೆ ಸರಿದರು. ತದನಂತರ ಫೀಲ್ಡ ಮಾರ್ಶಲ ಮೌಂಟ ಬ್ಯಾಟನರನ್ನು ಬರ್ಮಾ ಕಾಳಗದ ದಂಡನಾಯಕರನ್ನಾಗಿ ನಿಯಮಿಸಲಾಯಿತು. ಆಗ ಬರ್ಮಾ ಗಡಿಯಲ್ಲಿ ಬಹ್ವಂಶ ಭಾರತೀಯ ಸೈನ್ಯಪಡೆಗಳೇ ಇದ್ದುವು. ಆಫ್ರಿಕಾದ ಒಂದು ಸಣ್ಣ ಡಿವ್ಹಿಜನ್ "11th East African Division" ಬಂದಿದ್ದಿತು. ಈ ಆಫ್ರಿಕನ್ ಸೈನಿಕರಿಗೆ ಆಧುನಿಕ ಯುದ್ಧದ ಜ್ಞಾನವಿರಲಿಲ್ಲ. ಯುದ್ಧ ಪ್ರಾರಂಭವಾದ ನಂತರ ಭರತೀ ಮಾಡಿದ ಸೈನಿಕರಿದ್ದರು. ಅವರ ರಕ್ತದಲ್ಲಿ ಸೈನಿಕ ಜೀವನ ಹೊಂದಿಕೊಂಡು ಬಂದಿರಲಿಲ್ಲ. ಅದಕ್ಕಾಗಿ ಆ ಡಿವ್ಹಿಜನನ್ನು ಭಾರತೀಯ ಡಿವ್ಹಿಜನ್ನುಗಳ ಜತೆಯಾಗಿಯೇ ಸಾಗಿಸಲಾಗುತ್ತಿತ್ತು.

ಈ ಸಮಯದಲ್ಲಿಯೇ ಜಪಾನದ ಟೋಕಿಯೋ ಆಕಾಶವಾಣಿಯಿಂದ ಬಿತ್ತರಗೊಂಡ ಬಾನುಲಿ ಭಾಷಣ ಕೇಳುವಂತಿದೆ. ಈ ಭಾಷಣ ಮಾಡಿದವರು 'ಯಾಸುವಾ-ಯಾಮಾಡಾ'. ತಾರೀಖು ನಿಶ್ಚಯವಾಗಿ ಹೇಳಲಾಗುವದಿಲ್ಲ. ೧೯೪೩ ಸಪ್ಟಂಬರ ತಿಂಗಳಲ್ಲಿ ಈ ಭಾಷಣ ಬಿತ್ತರಗೊಂಡಿತು. ಯಾಸುವಾ ಯಾಮಾಡಾರವರು ಅಮೇರಿಕೆಯ ಜನತೆಯನ್ನುದ್ದೇಶಿಸಿ ಈ ಭಾಷಣವನ್ನು ಇಂಗ್ಲಿಷನಲ್ಲಿ ಮಾಡಿದ್ದರು.

"Ladies and Gentlemen of America, how do you do. The month of September usually marks the end of the rainy season in Burma, the country which has been talked about so much these days as a potential Battle front of the first degree.

Burma means to Japan a stone wall of defence against the allies as much as it means to the allies a gateway of offence against the Japanese forces. The allies must recover Burma and its appendage known as the Burma Road before they attempt to deliver a fatal blow against Japan now firmly established in that part of East Asia.

The appointment of vice admiral Lord Luis Mountbatten as the commander of the Anti Axis forces in South East Asia had two fold meaning: one is that the Anglo-American leaders put unprecedented importance on the coming battle of Burma, and the other is, they intend to bribe off Chiang Kai-shek as usual with empty offers of a high sounding appointment instead of supplying war materials needed more than anything else at this time.

The appointment of Lord Mountbatten may mean that the Allied forces in East Asia at least are mustering their strength to start something. Japan knows that very well. Japan is carefully watching all these United Nations air raids and the increased reinforcement of Chinese troops and she is preparing to meet any eventually with perfect confidence. She is more firmly entrenched in Burma now than she ever was. Her new ally, Burma, can furnish large numbers of fighting men with amazing zeal of oriental patriotism. Such being the spontaneous national psychology of the people. It is no exaggeration to say that every Burmese is now ready to fight against any and ill invader who might attempt to cross his national boundary.

Japan is fully prepared to meet the Anglo-American counter offensive for the recapture of

Burma, and she has a definite plan drawn up to let the enemy repeat the tragedy of Arakan of 1943, just as many times as accasion may require.

No matter who may take command of the Allied forces, Lord Louis Mountbatten or anyone else, it is a foregone conclusion that he is to suffer the same fate as General wavell, General Stilwell and General Auchinleck. If such be the case, the gateway of Burma, including the Burma Road, the only Passage to the backdoor of China shall remain closed indefinitely against the aggression of the Anglo-American forces.

Thank you for your attention, you have been listening to Yasua Yamada, speaking from Tokyo, in NEWS ON PARDAE. Goodbye and goodluck."

* * * *

## ಲಾನ್ಸ ಕಾರಪೋರಲ್ ಜಿಲ್‌ನ ಸಾವು

ಬರ್ಮಾ ಗಡಿಯಲ್ಲಿ ನಡೆದ ಕಾಳಗದಲ್ಲಿ— ಅಸಂಖ್ಯ ಭಾರತೀಯ ಸೈನಿಕರು ಸತ್ತಿದ್ದಾರೆ. ಹಾಗಾದರೆ ಈ ಬಿಲ್‌ನ ಸಾವಿನ ಕತೆಯಲ್ಲಿ ಏನಾದರೂ ವೈಶಿಷ್ಟ್ಯವಿದೆಯೇ ಎಂದು ಕೇಳಬಹುದು. ಅಂತಹ ವೈಶಿಷ್ಟ್ಯವೇನೂ ಇಲ್ಲ. ಆದರೆ ವಿಕ್ಷಿಪ್ತ ಮಾದರಿಯ ಮನುಷ್ಯನಾಗಿದ್ದ ಬಿಲ್.

ಚಿಂಡ್ವಿನ್ ಹೊಳೆಯ ಆಚೆ ಬದಿಯಲ್ಲಿ ಭಾರತೀಯ ಸೈನ್ಯಗಳು ಹೋರಾಡುತ್ತ ಜಪಾನರನ್ನು ಸೋಲಿಸುತ್ತ ಮುನ್ನಡೆದಿದ್ದವು. ಅವರ ಜತೆಯಲ್ಲಿ 11th east African division ದ ಒಂದು ತುಕುಡಿಯೂ ಇದ್ದಿತು. ಆ ತುಕುಡಿಯಲ್ಲಿ ಒಬ್ಬ ವಿಕ್ಷಿಪ್ತ ಸೈನಿಕನಿದ್ದ. ಆತ ಪೂರ್ವ ಆಫ್ರಿಕನನಿದ್ದ. ಆತ ಸೈನ್ಯಖಾತೆಯಲ್ಲಿ ಸೇರಿ ಮೂರು ವರ್ಷಗಳಾಗಿರಬಹುದು. ಈ ಮೂರೇ

ವರುಷಗಳ ಅವಧಿಯಲ್ಲಿ ಆತನ ಕಾಂಡಕ್ಟ ಶೀಟು, ಆತನ ನಡತೆ ಸರಿಯಾ ಗಿರದ್ದರ ಬಗೆಗೆ ಕೆಂಪು ಮಸಿಯಲ್ಲಿ ಬರೆಯಿಸಿಕೊಳ್ಳುವ ಶರಾಗಳಿಂದ ತುಂಬಿ ಹೋಗಿತ್ತು. ಆತ ತೀರ ಉದ್ಧಟನಾಗಿದ್ದ. ಎಂತೆಂತಹ ಘೋರ ಶಿಕ್ಷೆಗಳನ್ನು ಕೊಟ್ಟರೂ ಆತ ಶಿಕ್ಷೆಯನ್ನು ಅನುಭವಿಸಿ ಮತ್ತೆ ಮೊದಲಿನಂತೆ ಉದ್ಧಟತನ ದಿಂದ ವರ್ತಿಸುತ್ತಿದ್ದ. ವರಿಷ್ಟರಿಗೆ ಆತನೊಬ್ಬ ಸಮಸ್ಯೆಯಂತಾದ. ಈ ಮನುಷ್ಯನನ್ನು ಹೇಗೆ ಸುಧಾರಿಸಬೇಕು ಎಂಬುದು ಅವರಿಗೆ ತಿಳಿಯದೇ ಹೋಯಿತು.

ಕೆಲದಿನಗಳಲ್ಲಿಯೇ ಒಂದು ಅಪಾಯದ ಸ್ಥಳಕ್ಕೆ ೧೦ ಜನ ಸೈನಿಕರನ್ನು ಕಳಿಸುವದಿತ್ತು. ಈ ಬಿಲ್‌ನ ಕಮಾಂಡಿಂಗ ಆಫೀಸರನಿಗೆ ಒಂದು ಯೋಚನೆ ಹೊಳೆಯಿತು. ಕೂಡಲೇ ಬಿಲ್‌ನನ್ನು ಕರೆಯಿಸಿ ಅವನನ್ನು ಸಾದಾ ಸೈನಿಕ ನಿಂದ ಲಾನ್ಸ ಕಾರಪೋರಲ್ ಪ್ರೊಮೋಶನ್ ಕೊಟ್ಟು ೧೦ ಜನ ಆಫ್ರಿಕನ್ ಸೈನಿಕರ ಮುಖ್ಯಸ್ಥನನ್ನಾಗಿ ಮಾಡಿ ಆ ಅಪಾಯಕರ ಸ್ಥಳಕ್ಕೆ ಕಳಿಸಲಾಯಿತು. ತಾನಿಷ್ಟು ಉದ್ಧಟತನದಿಂದ ವರ್ತಿಸಿದರೂ ತನಗೆ ಪ್ರೊಮೋಶನ್ ಸಿಕ್ಕಿತಲ್ಲ ಎಂಬ ಸಂತೋಷದಲ್ಲಿ ಬಿಲ್ ೧೦ ಜನ ಸೈನಿಕರೊಡನೇ ಪ್ರಯಾಣ ಕೈಗೊಂಡನು.

ಮರುದಿನ ಬೆಳಿಗ್ಗೆ ಭಾರತೀಯ ಸೈನಿಕರು ಆ ಪ್ರದೇಶವನ್ನು ಗೆದ್ದುಕೊಂಡು ಮುಂದೆ ನಡೆದಾಗ ದಾರಿಯಲ್ಲಿ ಬಿಲ್ ಸತ್ತು ಬಿದ್ದಿದ್ದ. ಆತನ ಹಣೆಯಲ್ಲಿಯೇ ಜಪಾನೀ ಸೈನಿಕರ ಗುಂಡು ಬಡೆದಿತ್ತು.

ಅಂತೂ ಬಿಲ್ ಸುಧಾರಿಸಿದ್ದು— ಸಾವಿನಿಂದಲೇ.

## ಮೇಜರ ಅಲೆಕ್ಝಾಂಡರರ ಕೊಲೆ

ಬರ್ಮಾದ ಅಡವಿಯಲ್ಲಿ ನಮ್ಮ ವರ್ಕಶಾಪ್ ಕಂಪನಿ ಠಾಣ್ಯ ಹಾಕಿತ್ತು. ಆ ಯುನಿಟ್ಟಿನ ಹೆಸರು 1120 TPT. coy. (Transport company) ಮಿತ್ರ ಸೈನಿಕರು ಇನ್ನೂ ಇರಾವತಿ ನದಿಯನ್ನು ದಾಟಿರಲಿಲ್ಲ. ಸಾಮಾನ್ಯವಾಗಿ ನಮ್ಮ ಸೈನ್ಯ ಮುನ್ನುಗ್ಗುತ್ತಿರುವಾಗ ಅವುಗಳ ಹಿಂದಿನಿಂದ ವರ್ಕಶಾಪ್ ಕಂಪನಿ ಮತ್ತು Ordinance ಕಂಪನಿಗಳು ನಡೆದಿರುತ್ತವೆ. ಈ ಕಂಪನಿಗಳಲ್ಲಿ ಕೆಲಸ ಮಾಡುವವರೂ ಪಕ್ಕಾ ಸೈನಿಕರೇ. ಆದರೆ ಅವರು ಕೇವಲ ಸೈನಿಕರಲ್ಲ— ತಾಂತ್ರಿಕ ಶಿಕ್ಷಣವನ್ನು ಪಡೆದ ಈ ಸೈನಿಕರು. ವಾಯರ್ಲೆಸ್ ಮೆಕ್ಯಾನಿಕ್-ಇಲೈಕ್ಟ್ರಿಶಿಯನ್-ಟ್ರೇಸರ್ಸ ವೆಹಿಕಲ್ ಮೆಕ್ಯಾನಿಕ್- ಫಿಟರ್ಸ-ಆರ್ಮರ್ರ್ಸ ಇತ್ಯಾದಿ. ನಮ್ಮ ಟಿಪಿಟಿ ಕಂಪನಿಯಲ್ಲಿ ಈ ಜನರೇ ಹೆಚ್ಚು. ಉಳಿದವರಲ್ಲಿ ಕೆಲವರು ಡ್ರೈವ್ಹರರು- ೨-೩ ಜನ ಕ್ಲಾರ್ಕರು. ನಮ್ಮ ಕಂಪನಿ ಠಾಣ್ಯ ಹಾಕಿದ ಸ್ಥಳ ದಟ್ಟಡವಿಯಿಂದ ತುಂಬಿದ್ದಿತು. ಕಂಪನಿಯ ಸುತ್ತಲೂ ಮುಳ್ಳು ಬೇಲಿಯನ್ನು ಕಟ್ಟಿ- ಆ ತಂತಿಗಳಿಗೆಲ್ಲ-ಸಿಗರೇಟಿನ ಡಬ್ಬದ ತುಕುಡಿ ಮುಂತಾದವುಗಳನ್ನು ಕಟ್ಟಿ ಇಳಿಬಿಟ್ಟಿದ್ದೆವು. ಇದೊಂದು ಆಧುನಿಕ ಯುದ್ಧ ಪದ್ಧತಿ. ರಾತ್ರಿಯ ಸಮಯದಲ್ಲಿ ಶತ್ರು ಸೈನಿಕರು ಅಂಬೆಗಾಲಿಕ್ಕುತ್ತ ಕಳ್ಳತನದಿಂದ ಒಳಗೆ ಪ್ರವೇಶಿಸಿ ಬಾಂಬುಗಳನ್ನು ಸ್ಫೋಟಗೊಳಿಸುತ್ತಿರುತ್ತಾರೆ. ನಾಲ್ಕೆಂಟು ದಿಕ್ಕಿನಲ್ಲಿ ಸೆಂಟ್ರಿಗಳು ಕಾಯುತ್ತಿರುತ್ತಾರೆನೋ ನಿಜ. ಆದರೆ ಕಾವಲುಗಾರರಿಲ್ಲದ ಸ್ಥಳದಲ್ಲಿಂದ ಅವರು ನುಗ್ಗುಬಹುದಾಗಿದೆ. ಇಂಥ ಘಟನೆಗಳು ಸಂಭವಿಸಬಾರದೆಂದೇ ತಂತಿಗಳಿಗೆ ಸಪ್ಪಳ ಮಾಡುವ ತಗಡಿನ ಚೂರುಗಳನ್ನು ಕಟ್ಟಿ ಇಳಿಬಿಡುವರು. ಅಂದರೆ ಯಾರಾದರೂ ಕಳ್ಳತನದಿಂದ ಒಳನುಗ್ಗುವಾಗ ಸಪ್ಪಳವಾಗುತ್ತದೆ. ಹೀಗೆ ಸಪ್ಪಳವಾದಾಕ್ಷಣ ಕಾವಲುಗಾರರು ಧಾವಿಸಿ ಆಗಲಿರುವ ಅನಾಹುತವನ್ನು ತಪ್ಪಿಸುವರು.

ಈ ವರ್ಕಶಾಪ್ ಕಂಪನಿಯಲ್ಲಿ ನಾವು ೧೨೦ ಸೈನಿಕರಿದ್ದೆವು. ನಮ್ಮ ಕಂಪನಿಯ ಆಫೀಸರ ಕಮಾಂಡಿಂಗ, ಮೇಜರ ಅಲೆಕ್ಝಾಂಡರ ಎಂಬುವವರಿದ್ದರು. ಅವರು ಸುಮಾರು ೨೭ ವರುಷಗಳವರೆಗೆ ಭಾರತೀಯ ಸೈನ್ಯಖಾತೆ

ಯಲ್ಲಿ ನೌಕರಿಯನ್ನು ಮಾಡಿದವರಾದ್ದರಿಂದ ಉರ್ದು, ಹಿಂದೀ ಭಾಷೆಗಳನ್ನು ಅಸ್ಖಲಿತವಾಗಿ ಮಾತನಾಡುತ್ತಿದ್ದರು. ಅವರಿಗೆ ಸಹಾಯಕರಾಗಿ ಇನ್ನಿಬ್ಬರು ಆಂಗ್ಲ ಅಧಿಕಾರಿಗಳಿದ್ದರು. ಡಕ್ಸಬರಿ ಮತ್ತೊಬ್ಬರು ಮ್ಯಾಕ್ಯಾಂಟಾಯರ್ ಇವರಿಬ್ಬರೂ ಕ್ಯಾಪ್ಟನ್‌ರಿದ್ದರು. ನಮ್ಮ ಕಂಪನಿಯಲ್ಲಿ ಹಸನ ಎಂಬ ಮೈಗಳ್ಳ ಡ್ರಾಯವ್ಹರನಿದ್ದನು. ಆತ ಪಂಜಾಬದ ಸರಗೋದಾ ಜಿಲ್ಲೆಯವನಾಗಿದ್ದ. ಕೆಲಸವನ್ನು ತಪ್ಪಿಸಿಕೊಳ್ಳುವದರಲ್ಲಿ ನಿಷ್ಣಾತನಾಗಿದ್ದ. ಮೇಜರ ಅಲೆಕ್ಝಾಂಡರ ನಿಗೆ ಈತನ ಸ್ವಭಾವ ಚೆನ್ನಾಗಿ ತಿಳಿದಿತ್ತು. ಆದಕ್ಕೆ ಅವನು ಹಸನನಿಗೆ ಹೆಚ್ಚುಹೆಚ್ಚಿನ ಕೆಲಸವನ್ನು ಕೊಡುತ್ತಿದ್ದ. ಒಂದುಸಲ ಫ್ರಂಟಿನಲ್ಲಿ ಹೋರಾಡುವ ಸೈನಿಕರಿಗಾಗಿ ರಾಯಫಲ್‌ಗಳನ್ನು ಸಪ್ಲಾಯ ಮಾಡುವದಕ್ಕೋಸ್ಕರ ವಾಗಿ ಹಸನನಿಗೆ ಥ್ರೀಟನ್‌ರ ಗಾಡಿಯನ್ನು ಒಯ್ಯಲು ಅಜ್ಞಾಪಿಸಲಾಯಿತು. ಹಸನ್ ಬೇಕಂತಲೇ ತಪ್ಪಿಸಿಕೊಳ್ಳತೊಡಗಿದ-ಸಾಕಷ್ಟು ಸಮಯ ಹೋದರೂ ಹಸನ ಕೆಲಸಕ್ಕೆ ಸಿದ್ಧನಾಗದೇ ಇದ್ದುದರಿಂದ ಅಲೆಕ್ಝಾಂಡರ ಸ್ವತಃ ಪ್ಲಾಟೂನ ತಂಬೂದತ್ತ ಹೊರಟ. ಮೇಜರ ಅಲೆಕ್ಸ ತನ್ನ ತಂಬೂಕ್ಕೆ ಬರುತ್ತಿರುವ ದನ್ನು ನೋಡಿದ ಹಸನ್, ಕೂಡಲೇ 'ನಮಾಜು' ಮಾಡುವದಕ್ಕಾಗಿ ಕುಳಿತು ಕೊಂಡನು. ಅವನ ಈ ಢೊಂಗೀತನವನ್ನು ನೋಡಿ ಅಲೆಕ್ಝಾಂಡರ ಕೋಪಿಸಿ ಕೊಂಡನು. ಸಿಟ್ಟಿನ ಭರದಲ್ಲಿ ಅಲೆಕ್ಝಾಂಡರ ಹಸನನನ್ನು ಹಿಡಿದೆಳೆದು ಹೊರಗೆ ತಂದು— ಡ್ಯೂಟಿಯಮೇಲೆ ಕಳಿಸಿಕೊಟ್ಟನು. ಹಸನನಿಗೆ ಅಪಮಾನ ವಾದಂತಾಯಿತು. ಅಂತೂ ಡ್ಯೂಟಿಯಮೇಲೆ ಹೋಗಿ ಸಂಜೆ ೬ ಘಂಟೆಗೆ ಪುನಃ ಪ್ಲಾಟೂನಿಗೆ ಬಂದು ಊಟವನ್ನು ಮಾಡಿ ತನ್ನ ಕಿಸೆಯಲ್ಲಿದ್ದ ನೂರಾಐವತ್ತು ರೂಪಾಯಿಗಳನ್ನೆಲ್ಲಾ ಎಲ್ಲ ಸೈನಿಕರಿಗೆ ಹಂಚಿಬಿಟ್ಟ.

ರಾತ್ರಿ ಸುಮಾರು ೧೧ ಹೊಡೆದಿರಬೇಕು. ಕೇವಲ ಕಾವಲುಗಾರರು ತಮ್ಮ ತಮ್ಮ ಸ್ಥಳದಲ್ಲಿ ಜಾಗ್ರತವಾಗಿ ಕಾವಲು ಕೆಲಸವನ್ನು ಮಾಡುತ್ತಿದ್ದರು. ಒಂದೆಡೆಯೂ ದೀಪದ ಬೆಳಕಿರಲಿಲ್ಲ. ಮೇಜರ ಅಲೆಕ್ಝಾಂಡರರು ಪ್ರತಿದಿವಸ ರಾತ್ರಿ ಒಂದುಸಲ ಪ್ಲಾಟೂನಿನ ಸುತ್ತಲೂ ತಿರುಗಾಡಿಕೊಂಡು ಬರುತ್ತಿದ್ದರು. ಪ್ಲಾಟೂನಿನಲ್ಲಿಯ ಉಳಿದ ಜನವೆಲ್ಲವೂ ಮಲಗಿತ್ತು.

ಒಮ್ಮೆಲೆ ರಾಯಫಲ್ಲಿನ ಕರ್ಣಕಠೋರ ಶಬ್ದಕ್ಕೆ ಎಲ್ಲರೂ ಎಚ್ಚೆತ್ತರು. ಎಲ್ಲ ಸೈನಿಕರು ಮೊದಮೊದಲು ಜಪಾನೀ ಸೈನಿಕರೇ ದಾಳಿ ಇಕ್ಕಿದರೆಂದು ತಿಳಿ

ದರು. ಆದರೆ ಪುನಃ ಪುನಃ ಗುಂಡಿನ ಸಪ್ಪಳ ಬಾರದೇ ಇದ್ದುದರಿಂದ ಧೈರ್ಯ ದಿಂದ ಮೆಲ್ಲಮೆಲ್ಲನೇ ಸಪ್ಪಳ ಬಂದತ್ತ ನಡೆದರು. ಮೆಸ್ ಹಾಲಿನ ಹತ್ತಿರ ನರಳುವ ಧ್ವನಿ ಕೇಳಿಸಿತು. ಟಾರ್ಚದ ಬೆಳಕಿನಲ್ಲಿ ಮೇಜರ ಅಲೆಕ್ಸಾಂಡರ ಬಿದ್ದು ನರಳುತ್ತಿದ್ದರು. ಕ್ಯಾಪ್ಟನ್ ಡಕ್ಸಬರೀ ಮತ್ತು ಮ್ಯಕ್ಯಾಂಟಾಯರರೂ ಧಾವಿಸಿ ಬಂದು ಅಲೆಕ್ಸಾಂಡರರನ್ನು ಉಪಚರಿಸಿ "ಯಾರು ಹೊಡೆದರು ?" ಎಂದು ಕೇಳಿದರು. ಕತ್ತಲೊಳಗಿಂದ ಗುಂಡು ಬಂದು ಬಡಿದದ್ದರಿಂದ ಯಾರು ಎಂಬುದು ಅವರಿಗೂ ತಿಳಿಯದೇ ಹೋಯಿತು. ಮುಂದೆ ೫-೧೦ ನಿಮಿಷ ದಲ್ಲಿಯೇ ಮೇಜರ ಸಾಹೇಬರು ಕಣ್ಣು ಮುಚ್ಚಿದರು.

ಅಂದು ಮುಂಜಾನೆ ಮೇಜರಸಾಹೇಬರು ಹಸನನನ್ನು ಝುಬರಿಸಿ ಡ್ಯೂಟಿಯಮೇಲೆ ಕಳಿಸಿದ್ದನ್ನು ಎಲ್ಲರೂ ನೋಡಿದ್ದರು. ಆದರಿಂದಾಗಿ ಎಲ್ಲರೂ ಹಸನನನ್ನೇ ಶಂಕಿಸಿದರು. ಆದರೂ ಯಾವ ಪ್ರಮಾಣವಿಲ್ಲದೇ ಹೇಳುವದು ಹೇಗೆ. ಕೂಡಲೇ ಡಕ್ಸ ಬರಿಯವರು ಇಡೀ ಪ್ಲಾಟೂನಿನ ರೂಲಕಾಲ ಪರೇಡನ್ನು ಕರೆದರು. ಪಹರೆಯವರಿಂದ ಹಿಡಿದುಕೊಂಡು ಎಲ್ಲರೂ ಪರೇಡಿನಲ್ಲಿ ನಿಲ್ಲಬೇಕಾಯಿತು. ಈ ಚೆಕಿಂಗ ಪರೇಡಿನಲ್ಲಿ ಎಲ್ಲರೂ ಹಾಜರಿದ್ದರೂ ಒಬ್ಬ ಸೈನಿಕ ಗೈರುಹಾಜರನಿದ್ದ. ಅವನೇ ಹಸನ. ಡಕ್ಸಬರಿ ಕೂಡಲೆ ಅಮ್ಯುನಿಶನ್ ರೂಮ ತಪಾಸಿಸಿದರು. ಒಂದು ರಾಯಫಲ ಮತ್ತು ೮೦ ಗುಂಡುಗಳು ಕಾಣೆಯಾಗಿದ್ದವು. ಕೂಡಲೆ ಪ್ಲಾಟೂನಿನಸುತ್ತ ಸರ್ಪಕಾವಲನ್ನಿರಿಸಲಾಯಿತು.

ಯುದ್ಧದಲ್ಲಿ ಗುಂಡಿನಿಂದ ಸಾವಿರಾರು ಮರಣಗಳಾದರೂ ಈ ತರದ ಭಯಾನಕತೆ ವ್ಯಾಪಿಸುತ್ತಿರಲಿಲ್ಲ. ಇಲ್ಲಿ ಗುಂಡಿನಿಂದ ಒಬ್ಬ ಸತ್ತಾಗ— ಪರಿಸ್ಥಿತಿ ರಾವು ಬಡೆದಂತಾಗಿತ್ತು. ರಣಭೂಮಿಯಲ್ಲಿ ಸಾವಿರಾರು ಮರಣಗಳು ಘಟಿಸಿದರೂ ಅವು ಕೊಲೆಯೆನಿಸುವದಿಲ್ಲ. ಆದರೆ-ಅಲೆಕ್ಸಾಂಡರರ ಮರಣ "ಕೊಲೆಯ ಸದರಿನಲ್ಲಿ ಕೂಡುತ್ತಿತು."

ಅಂತೂ ಒಂದು ಭಯಾನಕ ಶಾಂತಿ ನಮ್ಮೆಲ್ಲರನ್ನು ವ್ಯಾಪಿಸಿತ್ತು.

ರಾತ್ರಿ ೨ ಹೊಡೆದರೂ ಹಸನನ ಸುಳವಿಲ್ಲ. ಅವನು ಓಡಿ ಹೋಗುವದಾದರೂ ಎಲ್ಲಿ. ಸುತ್ತೂಕಡೆಗೆ ಕೈಮುಟ್ಟದ ದಟ್ಟ ಕಾಡು. ಬಹಳವಾದರೆ ೨-೩ ದಿನ ಅಲ್ಲಿ ಅವಿತುಕೊಂಡು ಕೂಡಬಹುದು. ತದನಂತರ ಹಸಿವೆ ಅವನನ್ನು ಕಾಡಿಸುತ್ತದೆ. ಅವನು ಪುನಃ ಪ್ಲಾಟೂನಿಗೆ ಬರದಹೊರತು ಗತಿಯೇ

ಇಲ್ಲ. ಇಲ್ಲವೇ ಆತ್ಮಹತ್ಯೆ ಮಾಡಿಕೊಳ್ಳಬೇಕು. ಅಥವಾ ಅಡವಿಯೊಳಗಿನ ಹಿಂಸ್ರ ಪಶುಗಳಿಗೆ ಆಹಾರವಾಗಬೇಕು.

ಸುಮಾರು ೩॥ ಹೊಡೆದಿರಬಹುದು. ಪ್ಲಾಟೂನಿನ ಉತ್ತರಭಾಗದ ಕಾವಲುಗಾರನ ಗರ್ಜನೆ ಕೇಳಿಸಿತು "ಸ್ಟಾಪ್ ಹೂ ಕಮ್ಸ ದೇಅರ."

ಉಳಿದ ಸೈನಿಕರು ಅಲ್ಲಿ ಧಾವಿಸಿದರು. ಟಾರ್ಚಿನ ಬೆಳಕನ್ನು ಕೆಡವಲಾಯಿತು. ಆ ಬೆಳಕಿನಲ್ಲಿ ಎಲ್ಲರೂ ಹಸನನ್ನು ಗುರುತಿಸಿದರು.

ಡಕ್ಸಬರೀ ತಡಮಾಡದೇ ಹುಕುಮನ್ನು ಕೊಟ್ಟ. "ರೇಡ ಆ್ಯಂಡ ಅರೆಸ್ಟ."

ಕಾವಲು ನಿಂತ ಸೈನಿಕರು ರಾಯಫಲ್ಲಿನ ತುದಿಗೆ ಜೋಡಿಸಿದ ಬೆಯಾ್‌-ನೆಟ್ಟನ್ನು ಅವನ ಎದೆಗೆ ಹಿಡಿದು ಅವನನ್ನು ಸುತ್ತುವರಿದರು.

ಹಸನ್ ತುಂಬಾ ಬೆಂವತಿದ್ದ. ಜೋಲುಮುಖವನ್ನು ಹಾಕಿದ್ದ.

ಡಕ್ಸಬರಿ ಮುಂದುವರೆದು ಹಸನನನ್ನು ಮಾತನಾಡಿಸಿದ. "ಹಸನ್ ಕಂಹಾ ಗಯಾ ಥಾ" (ಹಸನ ಎಲ್ಲಿಗೆ ಹೋಗಿದ್ದಿ ?)

"ಬಾಹರ" (ಹೊರಗೆ).

"ಇಲ್ಲಿ ಅನಾಹುತ ನಡೆದುಹೋಗಿದೆ. ನಿನಗೆ ಗೊತ್ತಿದೆಯೋ ?"

"ಹೌದು."

"ಏನದು ?"

"ಮೇಜರ ಸಾಹೇಬರ ಖೂನು ಆಗಿದೆ."

"ಯಾರು ಮಾಡಿದ್ದಾರೆ ?"

"ನಾನೇ ಮಾಡಿರುವೆ."

ಹಸನನನ್ನು ಅರೆಸ್ಟ ಮಾಡಲಾಯಿತು.

ಮರುದಿನ ಟಪಾಲು ಬರುವ ದಿನವಿದ್ದಿತು. ಮಿಲ್ಟ್ರಿ ಟ್ರಕ್— ಬೇಸ್ ಹೆಡ್‌ಕ್ವಾರ್ಟರಿನಿಂದ ನಮ್ಮ ಟಪಾಲನ್ನು ತಂದುಕೊಡುತ್ತಿತ್ತು. ಅಂದಿನ ಟಪಾಲಿನಲ್ಲಿ ಅಲೆಕ್ಝಾಂಡರರ ಪಾರ್ಸಲು ಬಂದಿತ್ತು.

ಇಂಗ್ಲಂಡಿನಿಂದ ಅವರ ಹೆಂಡತಿ ಕೆಲವು ತಿನ್ನುವ ಜೀನಸುಗಳನ್ನು ಕಳಿಸಿದ ಳು.

ಮುಂದೆ ಒಂದುವಾರದ ನಂತರ ಮಿಲ್ಟ್ರಿ ಟ್ರಿಬ್ಯೂನಲ್ ಸೇರಿ ವಿಚಾರಣೆ ಮಾಡಿ, ಹಸನನಿಗೆ ಇಲೆಕ್ಟ್ರಿಕ್ ಚೇಅರಿನಿಂದ ದೇಹಾಂತ ಶಾಸನವನ್ನು ಕೊಟ್ಟಿತು.

ಕೋರ್ಟು ಶಿಕ್ಷೆಯನ್ನು ಜಾಹೀರ ಮಾಡಿದಮೇಲೆ ೨೦ ದಿನಗಳ ನಂತರ ಹಸನನನ್ನು ಇಲೆಕ್ಟ್ರಿಕ್ ಚೇಅರಿನಮೇಲೆ ಕೂಡಿಸಿ ದೇಹಾಂತ ಶಿಕ್ಷೆಯನ್ನು ಕೊಡಲಾಯಿತು.

## ಮುಖರ್ಜಿಯ ಸಾವು

ಜ್ಯೋತಿರ್ಮೋಹನ ಮುಖರ್ಜಿ ಎಂಬುವವರು ನನ್ನ ಗೆಳೆಯರಿದ್ದರೆಂದು ಮೊದಲೇ ಹೇಳಿರುವೆನಲ್ಲವೇ? ನಾವು ಶಹಜಹಾನಪೂರನ್ನು ಬಿಟ್ಟ ದಿನದಿಂದ ಅವರ ನನ್ನ ಪರಿಚಯವಾಗಿತ್ತು. ವಯಸ್ಸಿನಲ್ಲಿ ನನಗಿಂತಲೂ ಅವರು ಹಿರಿಯರಾಗಿದ್ದರು. ಅವರ ಮನೆ ಡಾಕಾದಲ್ಲಿದ್ದಿತು. ಮನೆತನದಿಂದ ಸರ್ವ ಸಾಧಾರಣ ಸ್ಥಿತಿಯಲ್ಲಿದ್ದರು. ಮಲತಾಯಿಯಕೂಡ ಜಗಳವಾಡಿ—ಮನೆಯಲ್ಲಿ ನಿಲ್ಲುವದಕ್ಕೆ ಬೇಸರವಾಗಿತ್ತು. ಮುಂದೆ ಬಂಗಾಲದಲ್ಲಿ ದುರ್ಭಿಕ್ಷೆ ತಾಂಡವವಾಡತೊಡಗಿತು. ಬಂಗಾಲ ಕಂಗಾಲವಾಗತೊಡಗಿತ್ತು. ಏಳೇಳು ದಿನಗಳವರೆಗೆ ಅನ್ನ ಕಾಣದೇ ಎಷ್ಟೋ ಜನ ಉಪವಾಸದಿಂದ ಬಳಲಿ ಬೆಂಡಾಗಿ ಸತ್ತುಹೋಗುತ್ತಿದ್ದರು. ಭಾರತದಲ್ಲಿ ಮೊದಮೊದಲು ಬಂಗಾಲಿಗಳು ಸೈನ್ಯ ಪಡೆಯನ್ನು ಸೇರಲಿಲ್ಲ. ಆದರೆ ಈ ದುರ್ಭಿಕ್ಷೆಯಿಂದ ಅವರು ಗತಿಗಾಣದೇ ಸೈನ್ಯಖಾತೆಯನ್ನು ಸೇರಬೇಕಾಯಿತು. ಮುಖರ್ಜಿಯೂ ಬಂಗಾಲದಲ್ಲಿಯ ದುರ್ಭಿಕ್ಷೆಯನ್ನು ಸಹಿಸಲಿಕ್ಕಾಗದೇ ಸೈನ್ಯಖಾತೆಯನ್ನು ಸೇರಿದ್ದ. ಆತ ಸೈನಿಕ ಶಿಕ್ಷಣ ಕೇಂದ್ರದಲ್ಲಿಯ ಶಿಕ್ಷಣವನ್ನು ಪಡೆದುಕೊಂಡು ೧ ತಿಂಗಳ ರಜೆ ಪಡೆದು ಮನೆಗೆ ಹೋದಾಗ ತಂದೆ ಆತನ ಲಗ್ನವನ್ನು ಮಾಡಿದ್ದರು. ಮನೆಯಕಡೆಗೆ ಸೆಳೆತವಿದ್ದಿತೆಂದರೆ ಪರದೇಶದಲ್ಲಿ ಸಲ್ಲದ ಕಾರ್ಯಕ್ಕೆ ಕೈ ಹಾಕುವದಿಲ್ಲವೆಂದು ತಿಳಿದೇ ಅವರ ತಂದೆ ಮಗನ ಲಗ್ನವನ್ನು ಅವಸರದಿಂದ ಮಾಡಿದ್ದರು. ಶಹಜಹಾನಪೂರದಿಂದ ನಾವು ಕೂಡಿ ಇದ್ದವರು ಕೊನೆಯವರೆಗೂ ಕೂಡಿಯೇ ಇದ್ದೆವು.

ಮುಖರ್ಜಿಯ ಸಾವಿನ ಕತೆಯನ್ನು ಹೇಳುವ ಮೊದಲು ಆತ ನನ್ನನ್ನು ಸಾವಿನ ದವಡೆಯಿಂದ ಪಾರು ಮಾಡಿದ ಕತೆಯನ್ನು ಮೊದಲು ಹೇಳಬೇಕಾಗುತ್ತದೆ.

ನಾನು ಮಿಲ್ಟ್ರಿಯಲ್ಲಿ ಸೇರಿದ ದಿನದಿಂದ ೩೫ ರೂಪಾಯಿ ಫ್ಯಾಮಿಲಿ ಅಲಾಟಮೆಂಟನ್ನು ನನ್ನ ತಂದೆಯವರ ಹೆಸರಿನಲ್ಲಿ ಮಾಡಿಸಿದ್ದೆ. ಅಂದರೆ ನಾವು ರಣಾಂಗಣದಲ್ಲಿ-ಅಡವಿಯಲ್ಲಿ ಎಷ್ಟೋ ವರುಷಗಳನ್ನು ಕಳೆದರೂ,

ಭಾರತದಲ್ಲಿ ನಮ್ಮ ರೆಕಾರ್ಡ ಆಫೀಸು ನಮ್ಮ ಹೆಸರಿನಿಂದ ನಾವು ಯಾರ ಹೆಸರನ್ನು ಸೂಚಿಸಿರುತ್ತೇವೊ ಅವರ ಹೆಸರಿಗೆ ನಾವು ಹಾಕಿಕೊಟ್ಟ ಅಂಕೆಯಷ್ಟು ರೂಪಾಯಿಗಳನ್ನು ಕಳಿಸುತ್ತಿರುತ್ತದೆ. ಸೈನಿಕರ ಅನುಕೂಲಕ್ಕಾಗಿ ಈ ಪದ್ಧತಿಯನ್ನು ಸರಕಾರ ಹಾಕಿದ್ದಿತು. ಸಾಮಾನ್ಯವಾಗಿ ಸೈನಿಕ ರಣಾಂಗಣದಲ್ಲಿ ದುಡಿಯುತ್ತಿರುವಾಗ ತಾನು ಸಂಬಳ ಪಡೆದು ಮನಿಆರ್ಡರಿನಿಂದ ದುಡ್ಡನ್ನು ಮನೆಗೆ ಕಳಿಸಲು ಬರುವಂಥ ಪರಿಸ್ಥಿತಿ ಇರುವದಿಲ್ಲ. ಹೀಗೆ ನಾನು ೩೫ ರೂಪಾಯಿಗಳ ಫ್ಯಾಮಿಲಿ ಅಲಾಟಮೆಂಟನ್ನು ಮಾಡಿಸಿದ್ದೆ. ಹೀಗೆ ಮಾಡಿಸಿದ್ದಾಗ್ಯೂ ನನ್ನ ತಂದೆಯವರು ನನಗೆ ಮೇಲಿಂದಮೇಲೆ ಮತ್ತೆ ರೂಪಾಯಿಗಳನ್ನು ಕಳಿಸಲು ಪತ್ರವನ್ನು ಬರೆಯುತ್ತಿದ್ದರು. ಇಷ್ಟೇ ಅಲ್ಲದೆ ಉಳಿದ ೩೦ ರೂಪಾಯಿಗಳನ್ನು ಹೇಗೆ ಖರ್ಚು ಮಾಡಿದೆ ಎಂಬ ವಿವರಗಳನ್ನು ತಿಳಿಸಲು ಒತ್ತಾಯಪಡಿಸುತ್ತಿದ್ದರು. ಸಾಮಾನ್ಯವಾಗಿ ರಣಾಂಗಣದಲ್ಲಿ— ಸೈನಿಕರಿಗೆ ಸಂಪೂರ್ಣ ಸಂಬಳವನ್ನು ಕೊಡುವದಿಲ್ಲ. ಅವರಿಗೆ ಎಷ್ಟು ಅವಶ್ಯಕವೆನಿಸುತ್ತಿದೆಯೋ ಅಷ್ಟನ್ನೇ ಕೊಡುತ್ತಾರೆ. ಉಳಿದ ರಕಂ ಅವರ ಹೆಸರಿನಲ್ಲಿ ಜಮಾ ಆಗಿಬಿಡುತ್ತದೆ. ರಜೆ ದೊರಕಿದಾಗ, ಹೀಗೆ ಉಳಿದ ಹಣವನ್ನೆಲ್ಲ ಒಮ್ಮೆಲೆ ಕೊಡುತ್ತಾರೆ. ರಣಾಂಗಣದಲ್ಲಿ ವೆಚ್ಚ ಮಾಡಬೇಕೆಂದರೂ— ವೆಚ್ಚವಾಗುವದಿಲ್ಲ. ಫುಕ್ಕಟೆ ಊಟ ವಸ್ತ್ರಗಳು ಸಿಗುತ್ತವೆ. ಸಿನೇಮಾ- ನಾಟಕಗಳು ಅಲ್ಲಿರಲಾರವು. ಇನ್ನು ಸಿಗರೇಟು ಇತ್ಯಾದಿ— ಅವುಗಳನ್ನೂ ಫುಕ್ಕಟೆಯಾಗಿ ಒದಗಿಸುತ್ತಿದ್ದರು. ಹೀಗಾಗಿ ಪ್ರತಿಯೊಬ್ಬ ಸೈನಿಕ ತಿಂಗಳಿಗೆ ೧೦-೧೫ ರೂಪಾಯಿಗಳನ್ನಷ್ಟೆ ಪಡೆಯುತ್ತಿದ್ದ.

ನಾವಿದ್ದ ಸ್ಥಳ-ದಟ್ಟಡವಿ- ಮಳೆ ಬೇರೆ ಧಾರಾಕಾರವಾಗಿ ಸುರಿಯುತ್ತಿತ್ತು. ವಿಪರೀತ ಸೊಳ್ಳೆಗಳ ಕಾಟ. ಮುಸುಕು ಹಾಕಿ ಮಲಗಿದವೆಂದರೆ ಒಳಗೆ ಸೆಕೆ— ಮುಸುಕು ತೆರೆದರೆ ಸೊಳ್ಳೆಗಳ ಕಾಟ. ದಿನವೂ ಪರೇಡಿನಲ್ಲಿ ಮ್ಯಾಪಾಕ್ರಿನ್ ಗುಳಿಗೆಗಳನ್ನು ನುಂಗುಬೇಕಾಗುತ್ತಿತ್ತು. ಆದರೂ ಮಲೇರಿಯಾ ಬೇನೆಗೆ ಬಹಳಷ್ಟು ಜನ ತುತ್ತಾಗುತ್ತಿದ್ದರು. ಇಂಥ ವಿಪರೀತ ಪರಿಸ್ಥಿತಿಯಲ್ಲಿ ಇದ್ದ ನನಗೆ ಪ್ರೇಮದ ಎರಡು ಶಬ್ದಗಳನ್ನು ಆಡುವವರು ಬೇಕಿದ್ದರು. ನನ್ನ ಸುತ್ತುಮುತ್ತಿನ ಸೈನಿಕರನ್ನೂ ನಾನು ನೋಡುತ್ತಿದ್ದೆ. ಅವರಿಗೆ ಮನೆಯಿಂದ ಬರುತ್ತಿದ್ದ ಸಿಹಿ ಸಿಹಿ ತಿನಿಸಿನ ಪಾರ್ಸಲುಗಳನ್ನೂ ನೋಡುತ್ತಿದ್ದೆ. ಪ್ರೇಮದಿಂದ ಬರುವ ಪತ್ರಗಳನ್ನು ನೋಡುತ್ತಿದ್ದೆ. ನನ್ನ ಸ್ಥಿತಿಗತಿ

ಯನ್ನು ಇನ್ನುಳಿದ ಸೈನಿಕರ ಸ್ಥಿತಿಗೆ ಹೋಲಿಸಿ ನೋಡತೊಡಗಿದೆ. ಮನಸ್ಸಿಗೆ ತುಂಬಾ ಅಸಹ್ಯವೆನಿಸಿತು. ಇಂಥ ಪರಿಸ್ಥಿತಿಯಲ್ಲಿ ಜೀವದಿಂದ ಇರುವದಕ್ಕೆ ಬೇಸರವೆನಿಸಿತು. ನನ್ನ ಹತ್ತಿರ ಆಗ ಒಂದೂವರೆನೂರು ರೂಪಾಯಿಗಳಿದ್ದವು. ಅವುಗಳನ್ನೆಲ್ಲ ನನ್ನ ತಂದೆಯವರಿಗೆ ಮುಟ್ಟಿಸಬೇಕು ಎಂಬಾಶಯದ ಪತ್ರವನ್ನು ಬರೆದಿಟ್ಟು, ಅಂದೇ ಸಂಜೆ ಆತ್ಮಹತ್ಯೆಯನ್ನು ಮಾಡಿಕೊಳ್ಳಬೇಕೆಂದು ಯೋಚಿಸಿದೆ. ಆದರಂತೆ ಧೃಢ ನಿರ್ಧಾರವನ್ನೂ ಮಾಡಿದೆ. ಅಂದು ಸಂಜೆ ಎಲ್ಲರೂ ಊಟಕ್ಕಾಗಿ ಮೆಸ್ಸಿಗೆ ಹೋದರು. ನಾನು ಮತ್ತು ಮುಖರ್ಜಿ ಇಬ್ಬರೂ ಒಂದೇ ತಂಬೂವಿನಲ್ಲಿರುತ್ತಿದ್ದೆವು. ಮುಖರ್ಜಿ ಊಟಕ್ಕೆ ಹೊರಡುವಾಗ ನನ್ನನ್ನು ಕೇಳಿದ.

" ನಡೆ ಊಟಕ್ಕೆ ಏಕೆ ತಡಮಾಡುತ್ತಿರುವೆ ? "

" ನನಗೆ ಹೊಟ್ಟೆಯಲ್ಲಿ ನೋಯುತ್ತಿದೆ. ನೀನೊಬ್ಬನೇ ಹೋಗಿ ಊಟ ಮಾಡಿ ಬಾ. "

ಮುಖರ್ಜಿ ಸುಮ್ಮನೇ ಮೆಸ್ಸಿನಕಡೆಗೆ ನಡೆದ. ಅವನು ಹೋದದ್ದೇ ತಡ ನಾನು ನನ್ನ ಬಂದೂಕನ್ನು ಸರಿಪಡಿಸಿಕೊಂಡೆ. ನನಗೆ ಜೀವನವೇ ಬೇಡವೆನಿಸಿತ್ತು. ಬಂದೂಕಿನಲ್ಲಿ ಗುಂಡುಗಳನ್ನು ತುಂಬುವಾಗ ಒಂದರೆನಿಮಿಷ ಆ ಗುಂಡುಗಳತ್ತ ನೋಡಿದೆ. ಮುಂದೈದು ನಿಮಿಷದಲ್ಲಿ ನಾನಿರುವದಿಲ್ಲ. ಈ ಜಗತ್ತು– ಈ ತಂಬೂ– ಈ ಯುದ್ಧ– ತಂದೆಯ ಹಣದಾಸೆ ಎಲ್ಲರಿಂದ ಮುಕ್ತನಾಗುವೆನು.

ರಾಯಫಲ್ಲಿನ ಮ್ಯಾಗ್‌ಝಿನ್ ಸರಿಪಡಿಸಿದೆ. ಕೈಯಲ್ಲಿ ಬಂದೂಕನ್ನು ಹಾಗೇ ಹಿಡಿದುಕೊಂಡು ಕ್ಷಣಕಾಲ ವಿಚಾರಿಸತೊಡಗಿದೆ. ಹೀಗೆ ಮಾಡುವದು ಒಳಿತೇ– ಒಳಿತೋ ಕೆಟ್ಟದ್ದೋ ಗೊತ್ತಿಲ್ಲ. ಆದರೆ ಯಾರಿಗೂ ಬೇಡವೆನಿಸಿದ ನಾನು ಉಳಿದು ಫಲವೇನು ? "ಥೂ"— ತಿರಸ್ಕಾರ ನನ್ನ ತಲೆಯಲ್ಲಿ ಸುಳಿದಾಡತೊಡಗಿತು. ಜಗತ್ತಿನತ್ತ ಒಂದು ಕ್ರೂರ ನೋಟ ಬೀರಿದೆ. ಜಗತ್ತಿನ ಜನವೆಲ್ಲ ಕ್ರೂರವಾಗಿದ್ದಾರೆ ಎಂಬುದೇ ನನ್ನ ದೃಢ ಅಭಿಪ್ರಾಯವಾಗಿತ್ತು. ಗುಂಡನ್ನು ಹೊಡೆದುಕೊಳ್ಳಲೇಬೇಕು ಎಂದು ನಿರ್ಧರಿಸಿದೆ. ಬಂದೂಕನ್ನು ಹಿಡಿದ ಕೈ ನಡುಗತೊಡಗಿತ್ತು. ಮೈತುಂಬ ಬೆಂವೆತೆ. ಮನಸ್ಸು ಚೀರಿ ಚೀರಿ ಹೇಳುತ್ತಿತ್ತು— "ಹೂಂ ತಡಮಾಡಬೇಡ, ಈ ಏಕಾಂತ ಇನ್ನೆಂದೂ ಲಭಿಸಲಿಕ್ಕಿಲ್ಲ. ಹೂಂ, ಸಿದ್ಧನಾಗು."

ಒಂದರೆನಿಮಿಷ ತಡಬಡಿಸಿದೆ. ಮತ್ತೆ ದೃಢನಿರ್ಧಾರ ಮಾಡಿದೆ. ಕಣ್ಣು ಮುಚ್ಚಿಕೊಂಡು ಬಾಂಬೂವಿಂದ ತಯಾರಿಸಿದ ಹೊರಸಿನಮೇಲೆ ಕುಳಿತು ಕೊಂಡು ಬಂದೂಕನ್ನು ಎದೆಗೆ ಗುರಿ ಇರಿಸಿಕೊಂಡೆ. ಇನ್ನೊಂದು ನಿಮಿಷ ವೇಳೆ ಸಿಕ್ಕಿದ್ದರೆ ಈ ಕತೆ ಹೇಳಲು ನಾನು ಉಳಿಯುತ್ತಿರಲಿಲ್ಲ. ಬಂದೂಕಿನ ಕುದುರೆಯನ್ನು ಇನ್ನು ಒತ್ತಬೇಕೆನ್ನುವಲ್ಲಿಯೆ ಮುಖರ್ಜಿ ತಂಬೂದಲ್ಲಿ ಪ್ರವೇಶಿಸಿದ. ಅವನ ಕೈಯಲ್ಲಿ ಚಪಾತಿ ಪಲ್ಯ ಹಾಕಿದ ಪ್ಲೇಟು ಇದ್ದಿತು. ನನ್ನನ್ನು ಆ ಸ್ಥಿತಿಯಲ್ಲಿ ನೋಡಿದ ಮುಖರ್ಜಿಗೆ ಪರಿಸ್ಥಿತಿ ಏನೆಂಬುದು ಹೊಳೆಯಿತು. ಕೂಡಲೇ ಪ್ಲೇಟನ್ನು ಅಲ್ಲಿಯೇ ಇರಿಸಿ, ನನ್ನ ಕೆನ್ನೆಗೊಂದು ಛಳೀರನೆ ಬಿಗಿದು ನನ್ನ ಕೈಯಲ್ಲಿದ್ದ ಬಂದೂಕನ್ನು ಕಸಿದುಕೊಂಡು, ಅದರಲ್ಲಿ ತುಂಬಿದ ಗುಂಡುಗಳನ್ನು ಹೊರತೆಗೆದು ನನ್ನ ಹತ್ತರ ಕುಳಿತುಕೊಂಡನು. ನನ್ನ ಕಣ್ಣಲ್ಲಿ ನೀರು ಬಂದಿತು. ಅವನ ಮುಂದೆ ಎಲ್ಲ ಕತೆಯನ್ನೂ ಹೇಳಿದೆ. ಆತ ನನ್ನನ್ನು ಕೆಂಟೀನಿಗೆ ಕರೆದುಕೊಂಡು ಹೋದ. ಅಲ್ಲಿ ನಾನು ನನ್ನ ಜೀವನದಲ್ಲಿ ಮೊದಲು ಸಲ ಸೆರೆಯನ್ನು ಕುಡಿದೆನು.

ಹೀಗೆ ನನ್ನನ್ನು ಸಾವಿನ ದವಡೆಯಿಂದ ಉಳಿಸಿದ ಮುಖರ್ಜಿಯನ್ನು ಮಾತ್ರ ಉಳಿಸಲು ಸಾಧ್ಯವಾಗಲಿಲ್ಲ. ಈ ಘಟನೆ ನಡೆದ ಕೆಲ ದಿನಗಳಲ್ಲಿ ನಮ್ಮ ವರ್ಕಶಾಪ ಕಂಪನಿಯನ್ನು ಮೂರು ಭಾಗವಾಗಿ ವಿಂಗಡಿಸಿ ಬೇರೆ ಬೇರೆ ಕಂಪನಿಯನ್ನಾಗಿ ಮಾಡಿದರು. ನಮ್ಮ ಕಂಪನಿಯ ಹೆಸರು 33 Indian Mobile Workshop Coy. ಎಂದು. ಮೇಲಿಂದಮೇಲೆ ನಮ್ಮ ವರ್ಕಶಾಪ ಕಂಪನಿ ರಣಾಂಗಣದ ಸಮಾಂತರವಾಗಿ ಅಲೆಯಬೇಕಾಗುತ್ತಿತ್ತು. ಹೀಗೆಯೇ ಒಂದು ಸಲ out dutyಗೆ ಮುಂಜಾನೆಯೇ ಹೊರಡಬೇಕಿತ್ತು. ನಾನೊಂದು ಗುಂಪಿನ ಜತೆಯಲ್ಲಿ ಹೋಗಬೇಕಿತ್ತು. ಮುಖರ್ಜಿ ಮತ್ತೊಂದು ಗುಂಪಿನ ಜತೆಯಲ್ಲಿ ಹೋಗಬೇಕಿತ್ತು. ನಾನೂ ಮುಖರ್ಜಿಯ ಗುಂಪಿನಲ್ಲಿಯೇ ಹೋಗಬೇಕೆಂದು ಹವಣಿಸಿದೆ. ಆದಕ್ಕೆ ಹವಾಲ್ದಾರ ಮೇಜರ ಟೀಕಾಖಾನ ಒಪ್ಪಲಿಲ್ಲ. ಹೀಗಾಗಿ ನಾವಿಬ್ಬರೂ ಬೇರೆ ಬೇರೆ ದಿಕ್ಕಿನಲ್ಲಿ ಹೋಗಬೇಕಾಯಿತು. ಸಾಯುಂಕಾಲ— ನಾನು ಪ್ಲಾಟೂನಿಗೆ ಮರಳಿ ಬಂದೆ. ಮುಖರ್ಜಿ ಮಾತ್ರ ಮರಳಿ ಬರಲಿಲ್ಲ. ನನ್ನ ಮನಸ್ಸಿನಲ್ಲಿ ಕೆಟ್ಟ ಕೆಟ್ಟ ವಿಚಾರಗಳು ಬರಲಾರಂಭಿಸಿದವು. ಮುಂದೆ ರಾತ್ರಿ ೧೨॥ ಗಂಟೆಗೆ ಮುಖರ್ಜಿ ಗುಂಪು ಬಂದಿತು. ನಾನು ಧಾವಿಸುತ್ತಲೇ ಟ್ರಕ್ಕುಗಳ ಬಳಿ ನಡೆದೆ. ಮನಸ್ಸಿನಲ್ಲಿ

ಏನೇನೋ ಕೆಟ್ಟ ಕೆಟ್ಟ ವಿಚಾರಗಳು ಸುಳಿಯುತ್ತಲೇ ಇದ್ದುವು. ನಾನು ಟ್ರಕ್ಕಿನ ಹತ್ತಿರ ಹೋಗುವಷ್ಟರಲ್ಲಿ— ಸ್ಟ್ರೆಚರಿನಲ್ಲಿ ಮುಖರ್ಜಿಯನ್ನು ಮಲಗಿಸಿ ಕೆಳಗೆ ಇರಿಸಿದ್ದರು. ನಾನು ನಡಗುವ ಕೈಗಳಿಂದಲೇ ಟಾರ್ಚನ್ನು ಹಚ್ಚಿದೆ. ಆ ಬೆಳಕಿನಲ್ಲಿ ಮುಖರ್ಜಿಯ ಎದೆತುಂಬ ರಕ್ತ ಕಾಣಿಸಿತು.

"ಏನು— ಏನಾಯಿತು ?" ಎಂದು ಕೇಳಿದೆ.

ಹತ್ತಿರ ನಿಂತಿದ್ದ ಸೈನಿಕ ಉತ್ತರಿಸಿದ—

"ಜಪಾನಿ ಸೈನಿಕರ ಗುಂಡು ತಗಲಿತು — ಸತ್ತುಹೋದರು."

ನಾನು ಮುಖರ್ಜಿಯ ಮೈಮೇಲೆ ಬಿದ್ದು ಚಿಕ್ಕ ಕೂಸಿನಂತೆ ಬಿಕ್ಕಿ ಬಿಕಿ ಅಳತೊಡಗಿದೆ. ನಾನು ಅತ್ತದ್ದು ಅದೇ ಮೊದಲು.

ನನಗೆ ಹಿಂದಿನ ನೆನಪುಗಳೆಲ್ಲ ಮರುಕಳಿಸಿ ದುಃಖ ಹೆಚ್ಚಾಗತೊಡಗಿತು. ಅಂದು ಶಹಜಾನಪೂರ ಸ್ಟೇಶನದಲ್ಲಿ ಇಬ್ಬರೂ ಭೆಟ್ಟಿಯಾದದ್ದು, ಲಖನೌ ಸ್ಟೇಶನದಲ್ಲಿ ಚಳಿಯಲ್ಲಿ ಬೆಂಕಿಯನ್ನು ಕಾಸುತ್ತ ಕುಳಿತುಕೊಂಡದ್ದು, ಎಲ್ಲ ಚಿತ್ರಗಳೂ ಕಣ್ಮುಂದೆ ಹಾಯ್ದು ಹೋದವು.

ಮುಖರ್ಜಿ ಒಂದು ಸಲ ಮನೆಯಿಂದ ಬಂದ ಪತ್ರವನ್ನು ಓದಿ, ಭಾಷಾಂತರಿಸಿ ಹಿಂದಿಯಲ್ಲಿ ಹೇಳಿದ್ದ. ಆವನ ಹೆಂಡತಿ ಮದುವೆಯಾದ ನಂತರ ಮೊದಲುಬಾರಿ ಬರೆದ ಪತ್ರ ಅದು.

ನನಗೇ ಇಷ್ಟು ದುಃಖವಾಗುತ್ತಿದ್ದಾಗ ಇನ್ನು ಆ ಬಡಪಾಯಿಗೆ ಎಷ್ಟು ದುಃಖವಾಗಬಹುದು. ಈಗ ಅವಳು ಕನಸುಮನಸಿನಲ್ಲಿಯೂ ಎಣಿಸದ ದುಃಖ ಆವಳಿಗಾಗಿ ಕಾಯುತ್ತಿದೆ— ಛೆ— ಭಯಾನಕ.

## ಆರಾಕಾನ

ನಮ್ಮ ಕಂಪನಿಗೆ ಒಬ್ಬ ಸೈನಿಕ ಹೊಸದಾಗಿ ವರ್ಗವಾಗಿ ಬಂದಿದ್ದ. ಆತ ಆರಾಕಾನ್ ಫ್ರಂಟಿನಲ್ಲಿ ನಡೆದ ಕಾಳಗದಲ್ಲಿ ಪ್ರತ್ಯಕ್ಷ ಭಾಗವಹಿಸಿದ್ದನು. ಅಲ್ಲಿ ತಾನು ಉಂಡ ಕಷ್ಟನಷ್ಟಗಳನ್ನೆಲ್ಲ ನಮ್ಮ ಮುಂದೆ ಬಣ್ಣಿಸಿದ್ದ. ಅವನು ಅನುಭವಿಸಿದ ಒಂದು ಕತೆ ಕುತೂಹಲಕಾರಿಯಾಗಿತ್ತು.

ಮಳೆಗಾಲದ ಸಮಯ. ೮-೧೦ ದಿನಗಳಿಂದ ಮಳೆ ಜೋರಾಗಿ ಬೀಳುತ್ತಿತ್ತು. ಆರಾಕಾನದಲ್ಲಿಯ ಈ ಸೈನಿಕನ ಗುಂಪು ಒಂದು ಅಡವಿಯಲ್ಲಿ ಸಿಕ್ಕಿಕೊಂಡು ಬಿದ್ದಿತ್ತು. ಸುತ್ತೂ ಕಡೆ ಜಪಾನೀ ಸೈನಿಕರು ಪಸರಿಸಿದ್ದರು. ಹೀಗಾಗಿ ಈ ಗುಂಪು ತಲೆಮರೆಸಿಕೊಂಡು ಅಡವಿಯಲ್ಲಿಯೇ ಬಿದ್ದಿತ್ತು. ಇದ್ದಷ್ಟೇ ಆಹಾರವನ್ನು ತಿಂದು ಮುಗಿಸಿ ಆಕಾಶದ ಕಡೆಗೆ ದಯಾರ್ದ್ರ ದೃಷ್ಟಿಯಿಂದ ಎಲ್ಲ ಸೈನಿಕರು ನೋಡುತ್ತಿದ್ದರು. ಅವಕಾಶ ಸಿಕ್ಕಿದಾಗ ಮಿತ್ರ ರಾಷ್ಟ್ರಗಳ ವಿಮಾನಗಳು ಆಹಾರವನ್ನು ಪ್ಯಾರಾಚೂಟಿಗೆ ಕಟ್ಟಿ ಒಗೆಯುತ್ತಿದ್ದರು. ಹೀಗಾಗಿ ಸೈನಿಕರು ಆಕಾಶದ ಕಡೆಗೆ ನೋಡುವದು ಸ್ವಾಭಾವಿಕವಾಗಿತ್ತು. ಮಳೆಗಾಲವಿದ್ದುದರಿಂದ ಕೊಳಚೆನೀರು ತುಂಬಾ ಸಿಗುತ್ತಿದ್ದರೂ ಕುಡಿಯುವ ನೀರು ಸಿಗುವಂತಿರಲಿಲ್ಲ. ಮನುಷ್ಯ ಹಸಿವೆಯನ್ನು ಸಹಿಸಿಕೊಳ್ಳಬಹುದು. ಆದರೆ ನೀರಡಿಕೆಯನ್ನು ಸಹಿಸಿಕೊಳ್ಳುವದು ಅಸಾಧ್ಯ. ಹೀಗೆ ತುಂಬಾ ನೀರಡಿಕೆಯಿಂದ ಬಳಲಿದ ಈ ಸೈನಿಕ ಇನ್ನೊಬ್ಬನನ್ನು ಜತೆಯಲ್ಲಿ ಕರೆದುಕೊಂಡು ತಾವು ಅಡಗಿಕೊಂಡ ಸ್ಥಳ ಬಿಟ್ಟು ೧-೨ ಫರ್ಲಾಂಗು ಮುನ್ನಡೆದ. ಆದರೂ ಕುಡಿಯಲು ಯೋಗ್ಯವಾದ ನೀರು ದೊರಕಲಿಲ್ಲ. ಒಂದೆಡೆಯಲ್ಲಿ ಮಾತ್ರ ಗುರುತಿಸಲು ಬಾರದ ೨-೩ ಸೈನಿಕರ ಶವಗಳು ಬಿದ್ದಿದ್ದವು. ಸತ್ತುಬಿದ್ದ ಆ ಸೈನಿಕರ ಸೊಂಟಕ್ಕೆ ವಾಟರ ಬಾಟಲಿಗಳಿದ್ದವು. ಈ ಸೈನಿಕ ಅವುಗಳನ್ನು ಅಲುಗಾಡಿಸಿ ನೋಡಿದ. ಅವು ನೀರಿನಿಂದ ತುಂಬಿದ್ದವು. ಸರಸರನೆ ಆ ಬಾಟಲಿಗಳನ್ನು ತೆಗೆದುಕೊಂಡು, ಮತ್ತೆ ತಾವಿದ್ದ ಸ್ಥಳಕ್ಕೆ ಬಂದು ನೀರು ಕುಡಿದರು.

ಹೇಸಿಗೆ-ಅಸಹ್ಯತೆಗಳು ನೀರಡಿಕೆಯಿಂದ ಬಳಲಿದ ಸೈನಿಕನಿಗೆ ಮುಟ್ಟಲಿಲ್ಲ. ಈ ಕತೆಯನ್ನು ಮೆಲುಕಾಡಿಸಿದಾಗ ಮೈಮೇಲೆ ಮುಳ್ಳೇಳುತ್ತವೆ.

## ದೇವರಿದ್ದಾನೆಯೆ ?

ಇದೂ ಒಂದು ಬರ್ಮಾ ಗಡಿಯಲ್ಲಿ ನಡೆದ ಕಾಳಗದಲ್ಲಿಯ ಘಟನೆಯೇ. ಒಬ್ಬ ಸೈನಿಕ ತುಂಬಾ ದೇವಭಕ್ತನಾಗಿದ್ದ. ವೇಳೆ ಸಿಕ್ಕಾಗಲೆಲ್ಲ ಗೀತಾ ಪಾರಾಯಣ ಮಾಡುತ್ತಲಿದ್ದ. ಆ ಗೀತಾ ಸಂಸ್ಕೃತದಲ್ಲಿದ್ದು ಹಿಂದೀ ಭಾಷೆಗೆ ಅನುವಾದ ಮಾಡಿದ್ದಿದ್ದಿತು. ಸಟೀಕ ಗೀತಾ ಇದ್ದುದರ ಮೂಲಕ ಅದು ಬಹಳೇ ದಪ್ಪವಿದ್ದಿತು. ಈ ಸೈನಿಕ ಯಾವಾಗಲೂ ಅದನ್ನು ತನ್ನ ಎದೆಯ ಮೇಲೆ ಇದ್ದ ಜೋಬಿನಲ್ಲಿಟ್ಟುಕೊಳ್ಳುತ್ತಿದ್ದ. ಆತನ ಈ ಪಾರಾಯಣ, ದಳ ದಲ್ಲಿಯ ಇನ್ನಿತರ ಸೈನಿಕರ ಚೇಷ್ಟೆಯ ವಿಷಯವಾಗಿತ್ತು. ಒಂದು ರಾತ್ರಿ ಸೈನಿಕರೆಲ್ಲ ಹರಟೆಯಲ್ಲಿ ಕುಳಿತಾಗ ಒಬ್ಬ ಸೈನಿಕ ಈತನನ್ನು ಚೇಷ್ಟೆ ಮಾಡ ಬೇಕೆಂದ. “ದೇವರನ್ನು ಈ ಪ್ರಕಾರವಾಗಿ ನೀನು ಭಜಿಸುತ್ತಿ. ಎಂದಾದರೂ ನಿನಗೆ ಆತ ಕಾಣಿಸಿಕೊಂಡಿರುವನೇ ?” ಆದರೆ ಈ ಸೈನಿಕ ಅದಕ್ಕೆ ಉತ್ತರ ವನ್ನೇ ಕೊಡಲಿಲ್ಲ. ಎಲ್ಲರೂ ನಕ್ಕರು.

ಮರುದಿನ ಈ ದಳ ಮುನ್ನಡೆಯಿತು. ೩-೪ ಮೈಲು ಹೋಗುವದರಲ್ಲಿ ಎದುರಿನಿಂದ ರಾಯಫಲ್ ಗುಂಡುಗಳು ಬರತೊಡಗಿದವು. ಕೆಲವರು ಮಡಿದರು. ಕೆಲವರು ಸಂರಕ್ಷಣೆಗಾಗಿ ಧಾವಿಸಿದರು. ಈ ದೇವಭಕ್ತ ಸೈನಿಕನಿಗೂ ದೂರಿನಿಂದ ಬಂದ ಒಂದು ಗುಂಡು ಎದೆಗೆ ಬಡಿಯಿತು. ಅದರಿಂದ ಆತ ನೆಲಕ್ಕೆ ಕುಸಿದು ಬಿದ್ದ. ಮುಂದೆ ಮೂರು ನಾಲ್ಕು ತಾಸುಗಳ ನಂತರ ಎಲ್ಲವೂ ಕ್ಲೀಅರ ಆದನಂತರ ಒಂದುಗೂಡಿಸುವ ಪರೇಡ ನಡೆಯಿತು. ಈ ಸೈನಿಕನನ್ನು ಸ್ಟ್ರೆಚರಿನಲ್ಲಿ ಹಾಕಿ ತರಲಾಯಿತು. ಆದರೆ ಎಲ್ಲರಿಗೂ ಆಶ್ಚರ್ಯವಾದುದೆಂದರೆ ಈ ಸೈನಿಕನಿಗೆ ಎಲ್ಲಿಯೂ ಘಾಯವಾಗಿರಲಿಲ್ಲ. ದೂರಿನಿಂದ ಬಂದ ಗುಂಡು ಎದೆಯಲ್ಲಿ ನಟ್ಟಿತ್ತಾದರೂ ಅಲ್ಲಿದ್ದ ಗೀತಾ ಪುಸ್ತಕದ ಕೊನೆಯ ರಟ್ಟಿನ ವರೆಗೆ ಮಾತ್ರ ಈ ಗುಂಡು ಹೋಗಿತ್ತು. ಆದರೆ ಸೈನಿಕನ ದೇಹಕ್ಕೆ ಯಾವದೇ ಬಗೆಯ ಅಪಾಯವಾಗಿರಲಿಲ್ಲ. ಎಲ್ಲರೂ ದಂಗುಬಡಿದರು.

ದೇವರು ತನ್ನ ಅಸ್ತಿತ್ವವನ್ನು ಇಂಥ ಆಶ್ಚರ್ಯಕರ ಘಟನೆಗಳಿಂದ ತೋರಿ ಸುತ್ತಾನೆಯೇ ವಿನಃ ಸಾಕಾರ ರೂಪವನ್ನು ಪ್ರಕಟಿಸಿ ಅಲ್ಲ.

ಮುಂದೆ ಬ್ರಿಗೇಡ್ ಹೆಡ್‌ಕ್ವಾರ್ಟರಿನವರು ಒಂದು ಸರ್ಕ್ಯೂಲರ ಹೊರಡಿಸಿ Geeta Saved the soldier— ಎಂದು ಶಿರೋನಾಮೆಯನ್ನಿರಿಸಿ ಎಲ್ಲರಿಗೂ ಈ ಆಶ್ಚರ್ಯಕರ ಸಂಗತಿಯನ್ನು ಅರುಹಿದರು.

೬

## ಬರ್ಮಾದ ಪತನ

ಯುರೋಪದ ರಣರಂಗವು ಹಿಟ್ಲರನ ಸೋಲಿನಿಂದ ಶಾಂತವಾಯಿತು. ಮಿತ್ರ ರಾಷ್ಟ್ರಗಳು ತಮ್ಮ ಸಂಪೂರ್ಣ ಶಕ್ತಿಯನ್ನು ಪೂರ್ವ ರಣಭೂಮಿಯತ್ತ ಹೊರಳಿಸಿದರು. ಜಪಾನು ಎಷ್ಟು ರಭಸದಿಂದ ಪೂರ್ವ ಏಶಿಯದ ಹಲವಾರು ರಾಷ್ಟ್ರಗಳನ್ನು ಗೆದ್ದಿತ್ತೊ, ಅಷ್ಟೇ ರಭಸದಿಂದ ಬರ್ಮಾದಲ್ಲಿ ಸೋಲನ್ನೊಪ್ಪ ತೊಡಗಿತು. ಬರ್ಮಾದ ಕಾಳಗವೇ ನಿರ್ಣಾಯಕ ಕಾಳಗವೆನಿಸಿತು. ಬರ್ಮಾ ದಲ್ಲಿ ಭಾರತೀಯ ಸೈನ್ಯಪಡೆ ದಿನೇ ದಿನೇ ಮುನ್ನುಗ್ಗತೊಡಗಿತು.

ಆಗ ಜಪಾನೀಯರ ದುಃಸ್ಥಿತಿಯನ್ನು ಹೇಳತೀರದು. ಜಪಾನೀ ಸೈನಿಕರು ನೊಣಗಳಂತೆ ಪಟಪಟನೆ ಸತ್ತುಬಿದ್ದರು. ಕೆಲವರಂತೂ ಸೋಲಿನ ಅವಮಾನ ವನ್ನು ಸಹಿಸಲಾರದೇ "ಹರಾಕಿರಿ" (ಜಪಾನೀ ಭಾಷೆಯಲ್ಲಿ ಆತ್ಮಹತ್ಯೆಗೆ "ಹರಾಕಿರಿ" ಎನ್ನುತ್ತಾರೆ.) ಮಾಡಿಕೊಂಡರು.

ಇರಾವತಿ ನದಿಯ ದಂಡೆಯಮೇಲೆ ಕೆಲವು ಜಪಾನೀ ಸೈನಿಕರ ಹೆಣ ಗಳನ್ನು ನೋಡಿದಾಗ ಕಲ್ಲೆದೆಯವನ ಕಣ್ಣಲ್ಲೂ ನೀರು ಬರಬಹುದು. ಒಬ್ಬ ಸೈನಿಕನ ಹೆಣದ ಫೋಟೋ ತೆಗೆಯುವಂತಿತ್ತು. ಅವನ ಒಂದು ಕೈ ಅನ್ನದ ತಟ್ಟೆಯಲ್ಲಿ ಇತ್ತು. ಅನ್ನ ಬುರುಸುಗಟ್ಟಿತ್ತು. ಅದು ಕೈಯಲ್ಲಿಯೇ ಉಳಿದಿತ್ತು. ಒಂದೆರಡು ತುತ್ತು ತಿಂದಿರಬಹುದು. ಅಷ್ಟರಲ್ಲಿ ಗುಂಡು ಬಡಿಯಿತು. ಅಲ್ಲಿಯೇ ಆತ ಸಾವನ್ನು ಅಪ್ಪಿದ. ತನ್ನ ಪಾಲಿಗೆ ಬಂದ ಅನ್ನವನ್ನು ಸಂಪೂರ್ಣ ವಾಗಿ ಉಣ್ಣಲೂ ಸಾಧ್ಯವಾಗಲಿಲ್ಲ. ಮೊದಲೇ ೨-೩ ದಿನಗಳಿಗೊಮ್ಮೆ ಆ ಸೈನಿಕರಿಗೆ ಊಟ ಸಿಗುತ್ತಿತ್ತು. ಆ ಸೈನಿಕನ ಸಾವು ಶೋಚನೀಯವಾದುದು. ಜಪಾನೀ ಸೈನಿಕರಲ್ಲಿಯ ವೈಶಿಷ್ಟ್ಯವೆಂದರೆ, ಅವರು ಜೀವಕ್ಕೆ ಕೊಡುವ ಬೆಲೆ. ಸೋತು ಹಿಂದಕ್ಕೆ ಓಡುವಾಗ ಅವರ ಬಟಾಲಿಯನ್ ಕಮಾಂಡರ ಹುಕು- ಮನ್ನು ಹೊರಡಿಸಿದ್ದ— "ಒಂದು ವೇಳೆ ಶತ್ರುಗಳ ಕೈಗೆ ಬೀಳುವ ಪ್ರಸಂಗ ಬಂದರೆ ಆತ್ಮಹತ್ಯವನ್ನು ಮಾಡಿಕೊಳ್ಳಿರಿ" ಎಂಬಾಶಯದ ಹುಕುಮನ್ನು ಹೊರಡಿಸಿದ್ದ.

ಬರ್ಮಾದಲ್ಲಿ ಜಪಾನೀಯರು ಸಂಪೂರ್ಣವಾಗಿ ಸೋಲನ್ನೊಪ್ಪುವ ಮೊದಲೇ ಅಣುಬಾಂಬಿನ ಸ್ಫೋಟವಾಯಿತು. ಮುಂದೆರಡು ದಿನಗಳಲ್ಲಿಯೇ ಯುದ್ಧ ಸಮಾಪ್ತಿಯಾಯಿತು.

ಯುದ್ಧೋತ್ತರ ಪುನರ್‍ರಚನೆಯ ಕೆಲಸಕ್ಕಾಗಿ ಹೊಸ ಹೊಸ ಬಟಾಲಿಯನ್‌ಗಳು ಬರತೊಡಗಿದವು. ಈ ಮೊದಲು ರಣರಂಗದಲ್ಲಿ ಹೋರಾಡುತ್ತಿದ್ದ ಬಟಾಲಿಯನ್ನುಗಳನ್ನು ಮರಳಿ ಭಾರತಕ್ಕೆ ಕಳಿಸಿಕೊಡಲಾಯಿತು.

ನಮ್ಮ ೩೩ ಇಂಡಿಯನ್ ಮೊಬಾಯಿಲ ವರ್ಕಶಾಪ ಕಂಪನಿಯೂ ಭಾರತಕ್ಕೆ ಬಂದಿತು. ಅರ್ಥಾತ್ ಶಹಜಹಾನಪುರಕ್ಕೆ ಬಂದು ಬೀಡು ಬಿಟ್ಟಿತು. ಅಲ್ಲಿ ಎಲ್ಲರಿಗೂ ೨ ತಿಂಗಳು ರಜೆ ಮಂಜೂರು ಮಾಡಿದರು.

೭

# ಮರಳಿ ಮನೆಗೆ

೬೦ ದಿನಗಳ ರಜೆ ಮಂಜೂರಾಯಿತು. ಪುನಃ ಮನೆಯ ಹಾದಿಯನ್ನು ಹಿಡಿದೆನು. ಏನೋ ಎಂತೋ ಮನೆಗೆ ಹೋಗಲೇಬಾರದೆಂದೆನಿಸುತ್ತಿತ್ತು. ನನ್ನನ್ನು ತುಂಬಾ ಪ್ರೀತಿಯಿಂದ ಕಾಣುತ್ತಿದ್ದ ನನ್ನ ಅಜ್ಜಿ, ಈ ಹಿಂದೆಯೇ ತೀರಿಕೊಂಡಿದ್ದಳು. ತುಂಬಾ ಸಹಾನುಭೂತಿಯಿಂದ ಕಾಣುತ್ತಿದ್ದ ಮತ್ತೊಂದು ವ್ಯಕ್ತಿಯಾದ ನನ್ನ ಅಕ್ಕನೂ ತೀರಿಕೊಂಡಿದ್ದಳು. ಹೀಗಾಗಿ ಮನೆಗೆ ಹೋಗುವದೇ ಬೇಡವೆನಿಸುತ್ತಿತ್ತು. ಆದರೂ ಮತ್ತೆಲ್ಲಿಯೂ ಗತಿ ಇರಲಿಲ್ಲ.

ಮನೆಗೆ ಬಂದೆ. ೨-೩ ದಿನ ಹೇಗೇಗೊ ಎನಿಸಿತು. ಸೈನ್ಯ ಖಾತೆಯಲ್ಲಿಯ ಶಿಸ್ತು ಮತ್ತು ಒಂದು ಬಗೆಯ ರುಕ್ಷ ಜೀವನ ಇಲ್ಲಿರಲಿಲ್ಲ. ಬೇಕೆನಿಸಿದಾಗ ಮಲಗಬಹುದು, ಬೇಡವೆನಿಸಿದಾಗ ಏಳಬಹುದು. ಮ್ಯಾಪಾಕ್ರಿನ್ ಗುಳಿಗೆಗಳನ್ನು ನುಂಗಲೇಬೇಕೆನ್ನುವ ಒತ್ತಾಯವಿಲ್ಲ. ಬಹಳ ದಿನಗಳಿಂದಲೂ ಕಟ್ಟಿಹಾಕಿದ ನಾಯಿಯ ಕೊರಳೊಳಗಿನ ಸರಪಳಿಯನ್ನು ಬಿಚ್ಚಿದಂತೆನಿಸಿತ್ತು.

ಹಿಂದಿನ ದಿನಗಳ ನೆನಹು ಒಂದೊಂದಾಗಿ ಕಣ್ಣೆದುರಿನಲ್ಲಿ ಸುಳಿಯತೊಡಗಿದವು. ನನ್ನ ಸರೀಕರಲ್ಲಿ ಕೆಲವರು ಕಾಲೇಜನ್ನೂ ಸೇರಿದ್ದರು. ಕೆಲವರು ನೌಕರಿಯಲ್ಲಿದ್ದರು. ಅವರ ಇರುವನ್ನು ನೋಡಿದಾಗ— ನನ್ನ ಸ್ಥಾನಮಾನದ ಬಗೆಗೆ ಅಸಹ್ಯವೆನಿಸತೊಡಗಿತು. ನಾನು ಕಾಲೇಜನ್ನು ಕಾಣುವದು ಈ ಜನ್ಮದಲ್ಲಾದರೂ ಸಾಧ್ಯವೇ? ಎಂಬ ಕಳವಳ ನನ್ನ ಮನಸ್ಸನ್ನೂ ವ್ಯಾಪಿಸಿತು. ಇನ್ನುಳಿದವರು ನಾಗರಿಕರಾಗಿ ಸರಕಾರೀ ವೃತ್ತಿಯಲ್ಲಿ ತೊಡಗಿ ಸದ್ಗೃಹಸ್ಥರಾಗಿದ್ದರು. ಅವರಂತೆ ನಾನು ಆಗಲು ಸಾಧ್ಯವೇ? ಎನ್ನುವ ಚಿಂತೆ. ಈಗೇನೋ ಸೈನಿಕನಾಗಿರುವೆ. ನಾಳೆ ಸೈನಿಕವೃತ್ತಿಯಿಂದ ಬಿಡುಗಡೆಯಾದ ನಂತರ ಮಾಡುವದೇನು? ಎಂಬ ಚಿಂತೆ. ಮುಂದೆ ನಡೆಯಬಹುದಾದ ಅಥವಾ ಬರಲಿರುವ ಅನಾಹುತವನ್ನು ಮೊದಲಿನಿಂದಲೇ ಯೋಚಿಸಿ ದುಃಖವನ್ನು ಇಮ್ಮಡಿಯಾಗಿ ಮಾಡಿಕೊಳ್ಳುವಷ್ಟು ಸೈನಿಕ ದೂರದೃಷ್ಟಿಯುಳ್ಳವನಿರುವದಿಲ್ಲ. ಹಿಂದೆ ನಡೆದ ಘಟನೆಗಳನ್ನು ಮರೆತು ಮುಂದೆ ಬರಬಹುದಾದ

ಭವಿಷ್ಯತ್‌ಕಾಲದ ಗೋಜಿಗೆ ಹೋಗದೇ ಕೇವಲ ಇಂದಿನದಕ್ಕಷ್ಟೇ ಗಂಟು ಬೀಳುವ ಜನರಲ್ಲಿ ಸೈನಿಕ ಮೊದಲತರಗತಿಯನ್ನು ಪಡೆಯಬಲ್ಲ. ನಾನೂ ಈಗ ಸೈನಿಕನಾಗಿದ್ದೆ. ಎಂದಮೇಲೆ ನನಗೂ ಈ ಹೊಸ ಚಿಂತೆಗಳು ಬಹು ವೇಳೆಯವರೆಗೆ ಕಾಡಿಸಲಿಲ್ಲ. ಮನೆಗೆ ಬರುವಾಗ ಜೇಬು ತುಂಬಿತ್ತು. ಅವರ ಮುಕ್ಕಾಲು ಪಾಲಿನಷ್ಟು ತಂದೆಯ ಕೈಯಲ್ಲಿ ಸುರುವಿ— ಕಾಲು ಭಾಗ ಉಳಿಸಿ ಕಾಲಹರಣ ಮಾಡಿ— ೬೦ ದಿನಗಳನ್ನು ಕಳೆದು ಪುನಃ ಶಹಜಹಾನಪುರದ ಕಡೆಗೆ ಹೊರಟೆ.

ನಮ್ಮ ಕಂಪನಿಯ ಸೈನಿಕ ಮಿತ್ರರನ್ನು ಕಾಣುವ ಕುತೂಹಲ ಈಗ ಹೆಚ್ಚಾಗತೊಡಗಿತ್ತು.

೬೦ ದಿನಗಳ ದೀರ್ಘ ಅವಧಿಯ ನಂತರ ಪುನಃ ಎಲ್ಲರೂ ಒಂದೆಡೆ ಸೇರಿದೆವು. ಪುನಃ ಒಂದೆಡೆ ಸೇರಿದ್ದಕ್ಕಾಗಿ ಪ್ರತಿ ಸೈನಿಕನಿಗೆ ಆನಂದವಾಗಿದ್ದರೂ— ಮನೆ ಬಿಟ್ಟು ಬಂದುದರ ದುಃಖದ ಛಾಯ ಇನ್ನೂ ಮಾಯ್ದಿರಲಿಲ್ಲ. ಶಹಜಹಾನಪೂರಿನಲ್ಲಿ ಹೇಳಿಕೊಳ್ಳುವಂಥ ಘಟನೆಗಳಾವವೂ ಜರುಗಲಿಲ್ಲ. ಸುಭಾಸಚಂದ್ರ ಬೋಸರ ಆಝಾದಹಿಂದ ಸೇನೆಯ ವಿಷಯ ಕೂಲಂಕುಷವಾಗಿ ಓದಿ ತಿಳಿದುಕೊಂಡೆವು. ಬರ್ಮಾದ ಭಾರತದ ಗಡಿಯ ವರೆಗೂ ಆಝಾದಹಿಂದ ಸೇನೆ ಬಂದಿದ್ದಿತಾದರೂ ಬರ್ಮಾದ ಗಡಿಯಲ್ಲಿಯೇ ತಳಊರಿದ ಸೈನಿಕರಿಗೆ ಮಾತ್ರ ಆಝಾದಹಿಂದ ಸೇನೆಯ ಚಟುವಟಿಕೆಗಳು ತಿಳಿದಿರಲಿಲ್ಲ.

## ಮತ್ತೆ ಪರದೇಶಕ್ಕೆ

ಶಹಜಹಾನಪೂರಿನಲ್ಲಿ ಎರಡೇ ಎರಡು ವಾರಗಳನ್ನು ಕಳೆದೆವು. ಮತ್ತೆ ನಮ್ಮ ವರ್ಕಶಾಪ ಕಂಪನಿಗೆ ಮಲಾಯಾಕ್ಕೆ ಯುದ್ಧೋತ್ತರ ಪುನರ್ರಚನೆಯ ಕಾರ್ಯಕ್ಕಾಗಿ ಹೊರಡಲು ಆಜ್ಞೆಯಾಯಿತು. ನಾವು ಝಾಂಸಿ ಮಾರ್ಗವಾಗಿ ಮದ್ರಾಸ ರೆಸ್ಟ ಕ್ಯಾಂಪನ್ನು ಸೇರಿದೆವು. ನಮ್ಮಲ್ಲಿ ಎರಡು ಭಾಗಗಳನ್ನಾಗಿ ಮಾಡಲಾಯಿತು. ವರ್ಕಶಾಪ ಸ್ಟೋರ ಮತ್ತು ಥ್ರೀ ಟನ್ನರ ಗಾಡಿಗಳನ್ನು ತೆಗೆದುಕೊಂಡು ೫೦ ಜನ ಡ್ರಾಯವ್ಹರರು ಕಲಕತ್ತೆಗೆ ಹೋಗಬೇಕಾಯಿತು. ಅವರು ಅಲ್ಲಿಂದ ಹಡಗವನ್ನೇರಿ ನಮ್ಮನ್ನು ಸಿಂಗಾಪೂರಿನಲ್ಲಿ ಕೂಡಿಕೊಳ್ಳುವದು ಎಂದು ನಿರ್ಧರಿಸಲಾಯಿತು.

ನಾವು ೧೫೦ ಸೈನಿಕರು ಮದ್ರಾಸ ರೆಸ್ಟ ಕ್ಯಾಂಪಿನಲ್ಲಿಳಿದು, ಒಂದು ವಾರ ಅಲ್ಲಿ ತಂಗಿದೆವು. ಇದೇ ಅವಧಿಯಲ್ಲಿ ಮಹಾತ್ಮಾ ಗಾಂಧಿಯವರು ಮದ್ರಾಸಕ್ಕೆ ಬಂದಿದ್ದರು. ಆಗ ಅವರು ಮಾಂಬಾಲಂದಲ್ಲಿ ಇರುತ್ತಿದ್ದರು. ಒಂದು ದಿನ ಸಂಜೆ ನಾನು ಮತ್ತು ನಿಯೋಗಿ (ಒಬ್ಬ ಬಂಗಾಲಿ ಸೈನಿಕ) ಇಬ್ಬರೂ ಅವರನ್ನು ಕಾಣುವದಕ್ಕೋಸ್ಕರ ಹೊರಟೆವು. ಮಾಂಬಾಲಂದಲ್ಲಿ ವಿಪರೀತ ಗದ್ದಲವಿದ್ದಿತು. ಮೇಲಾಗಿ ನಾವು ನಮ್ಮ ಸೈನಿಕ ಸಮವಸ್ತ್ರಗಳನ್ನು ಧರಿಸಿಕೊಂಡೇ ಹೋಗಿ

ದ್ದೆವು. ಸುತ್ತಲಿನ ಜನವೆಲ್ಲ ನಮ್ಮನ್ನು ಕುತ್ಸಿತ ದೃಷ್ಟಿಯಿಂದ ನೋಡ ತೊಡಗಿದ್ದರು. ನಮಗೆ ಯಾರ ದೃಷ್ಟಿಯ ಪರಿವೆ ಇರಲಿಲ್ಲ. ನಾವು ಮಹಾತ್ಮಾಜಿ ಯವರ ದರ್ಶನಕ್ಕಾಗಿ ಹಾತೊರೆಯುತ್ತಿದ್ದೆವು. ಮೊದಲುದಿನದ ಪ್ರಯತ್ನ ವ್ಯರ್ಥವಾಯಿತು. ಎರಡನೇಯ ದಿನ ಸಫಲವಾಯಿತು. ನಾನು ಮಹಾತ್ಮಾಜಿ ಯವರನ್ನು ಕಂಡದ್ದು ಅದೇ ಮೊದಲು— ಅದೇ ಕೊನೆಯದು. ೧೯೪೬ ಜನವರಿಯ ಸಮಯವಿದ್ದಿರಬಹುದು.

ಮದ್ರಾಸದಲ್ಲಿ ಆಗಲೇ ಸೆಕೆಗೆ ಪ್ರಾರಂಭವಾಗಿತ್ತು. ಆ ಸೆಕೆಯಿಂದೊಮ್ಮೆ ಪಾರಾದರೆ ಸಾಕು ಎನ್ನುವಾಗ ನಾವು ಮರುದಿನವೇ ಹಡಗವನ್ನೇರುವದು ಎಂದು ರಿಸ್ಟ್ರಕ್ಯಾಂಪದ ಬಾನುಲಿ ಸಾರಿತು. ಮದ್ರಾಸ್‌ದ ರಿಸ್ಟ್ರಕ್ಯಾಂಪ ವೆಂದರೆ ಮದುವೆಯಕಾಲಕ್ಕೆ ನಿಬ್ಬಣಕ್ಕಾಗಿ ಊರಿಗೆ ಊರೇ ಬಂದ ತಂಡದ ಪ್ರತಿರೂಪದಂತಿತ್ತು. ಪರದೇಶಕ್ಕೆ ಹೋಗಿದ್ದ ಭಾರತೀಯ ಸೈನ್ಯ ಹಿಂತಿರುಗು ತ್ತಿತ್ತು. ಮದ್ರಾಸ ಬಂದರದಲ್ಲಿ ಈ ಪಡೆಗಳು ಇಳಿದುವೆಂದರೆ ನೇರವಾಗಿ ರಿಸ್ಟ್ರಕ್ಯಾಂಪಿಗೆ ಬರಲೇಬೇಕು. ಅವರು ಪರದೇಶದಲ್ಲಿ ತೆರವು ಮಾಡಿದ ಸ್ಥಳ ಗಳನ್ನು ತುಂಬುವದಕ್ಕಾಗಿ ಹೊರ ದೇಶಕ್ಕೆ ಹೊರಟ ಸೈನ್ಯಪಡೆಗಳೂ ಹಡಗದ ವ್ಯವಸ್ಥೆಯಾಗುವವರೆಗೂ ರಿಸ್ಟ್ರಾಕ್ಯಾಂಪಿನಲ್ಲಿಯೇ ಇರಬೇಕು. ಹೀಗಾಗಿ ರಿಸ್ಟ್ರಕ್ಯಾಂಪ ಯಾವಾಗಲೂ ಸೈನಿಕರಿಂದ ತುಂಬಿದ್ದಿತು.

ಮರುದಿನ ಮುಂಜಾನೆ ಹೊರಡುವ ಸೂಚನೆಯನ್ನು ನಮಗೆ ಕೊಡಲಾ ಯಿತು. ಹೀಗೆ ಸೂಚನೆಯನ್ನು ಒಂದುದಿನ ಮೊದಲುಕ್ಕೆ ಕೊಡಲಾಗುತ್ತದೆ. ಸೂಚನೆ ಕೊಟ್ಟದಿನವೇ ನಮ್ಮ ತಂಬೂವಿನ ಸಾಲಿನಲ್ಲಿ ಒಬ್ಬನಿಗೆ ಪ್ಲೇಗು ಬಂದಿತು. ಪ್ಲೇಗಿನ ಕೇಸು ಎಂದಾಕ್ಷಣ ಇಡೀ ಆ ಸಾಲನ್ನೇ ಸಿಗ್ರಿಗೇಟ (ದೂರವಿರಿಸುವ) ಎಂದು ಸಾರಲಾಯಿತು. ನನಗಂತೂ ಮದ್ರಾಸದಲ್ಲಿ ತುಂಬಾ ಬೇಜಾರು ಬಂದಿತ್ತು. ಆ ಸೆಕೆಯನ್ನು ತಾಳುವಂತಿರಲಿಲ್ಲ. ನಾನು ಆ ಸಾಲನ್ನು 'ಸಿಗ್ರಿಗೇಟ' ಎಂದು ಸಾರುವ ಮೊದಲೇ ಬೇರೊಂದು ತಂಬೂಕ್ಕೆ ಹೋಗಿ ಹಾಸಿಗೆಯನ್ನಿರಿಸಿದೆ. ಸಿಗ್ರಿಗೇಟ ಎಂದು ಸಾರಿದನಂತರ ನಮ್ಮ ಪ್ರವಾಸ ತಾತ್ಕಾಲಿಕ ರದ್ದಾದಂತೆಯೇ. ಅಲ್ಲದೇ ಮತ್ತೊಂದು ಹಡಗಿನ ವ್ಯವಸ್ಥೆಯಾಗುವವರೆಗೆ ಮದ್ರಾಸೇ ಗತಿ. ನಾನು ಅದಕ್ಕಾಗಿಯೇ ಬೇರೆ ತಂಬೂವಿಗೆ ನನ್ನ ಕಿಟ್‌ಬ್ಯಾಗನ್ನು ಒಯ್ದು ಚೆಲ್ಲಿದೆ. ಆದರೆ ಸಮದುಃಖಿಗಳಾದ

ಇನ್ನುಳಿದ ಸೈನಿಕರಿಗೆ ಇದು ಸರಿಬರಲಿಲ್ಲ. ಅಂತೂ ಈ ಸುದ್ದಿ ರೆಸ್ಟಕ್ಯಾಂಪ ಸುಭೇದಾರರಿಗೆ ತಲುಪಿತು. ಮರುಕ್ಷಣವೇ ರೆಸ್ಟಕ್ಯಾಂಪಿನ ಲೌಡ್‌ಸ್ಪೀಕರ ಕೂಗಿಕೊಂಡಿತು. "ಹವಾಲ್ದಾರ ಅರ್ವಿಜ ನಂ. ........ ಬೇಗನೇ ಆಫೀಸಿಗೆ ಬಂದು ಸುಭೇದಾರರನ್ನು ಕಾಣಬೇಕು." ಲೌಡ್‌ಸ್ಪೀಕರಿನಲ್ಲಿ ನನ್ನ ಹೆಸರು ಸಾರಿದಾಕ್ಷಣ ನನಗೊಂದು ಕ್ಷಣ ಹೆದರಿಕೆ ಎನಿಸಿತು. ಏಕಂದರೆ ಸೈನ್ಯಖಾತೆ ಯಲ್ಲಿ ಈ ರೀತಿ ಬೇಶಿಸ್ತಿನಿಂದ ವರ್ತಿಸಿದರೆ ಶಿಕ್ಷೆ ಕಟ್ಟಿಟ್ಟದ್ದೆ. ನಾನು ಲಗು ಬಗೆಯಿಂದ ರೆಸ್ಟಕ್ಯಾಂಪ ಡಾಕ್ಟರರ ಕಡೆಗೆ ಹೋಗಿ ಇದ್ದ ಸಂಗತಿಯನ್ನೆಲ್ಲ ಅರು ಹಿದೆ. ಡಾಕ್ಟರರು ನಗತೊಡಗಿದರು "ಎಲ್ಲರೂ ಪರದೇಶ ಪ್ರವಾಸವನ್ನು ತಪ್ಪಿಸಿಕೊಳ್ಳಬೇಕೆಂದು, ಇಲ್ಲದ ನೆವ ಹೂಡಿ, ನನ್ನಕಡೆಗೆ ಬರುತ್ತಿರುತ್ತಾರೆ. ನೀನು—ಇಲ್ಲಿ ನಿಲ್ಲಲು ಮನಸ್ಸಿಲ್ಲದೇ ಪರದೇಶ ಪ್ರವಾಸಕ್ಕೆ ಉತ್ಸುಕನಾಗಿರುವಿ. ಸರಿ ನಾನು ತಪಾಸಿಸಿ ನಿನಗೆ Free from diseases ಸರ್ಟಿಫಿಕೇಟು ಕೊಡುವೆ." ಎಂದು ಹೇಳಿ ಅವರು ನನ್ನನ್ನು ತಪಾಸಿಸಿ ಹಾಗೆ ಸರ್ಟಿಫಿಕೇಟನ್ನು ದಯಪಾಲಿಸಿದರು. ಅಂತೂ ಪಾರಾದೆ.

## ಪುನಃಶ್ಚ ಹರಿಃ ಓಂ

ಮರುದಿನ ಮುಂಜಾನೆ ೯ ಘಂಟೆಗೆ "ತಾಲ್ಮಾ" ಹಡಗವನ್ನೇರಿದೆವು. ನಮಗಾಗಿ ಕಾದಿರಿಸಿದ ಡೆಕ್ಕುಗಳಿಗೆ ನಡೆದೆವು. ನಮ್ಮ ಹಡಗದಲ್ಲಿ ಭಾರತೀಯ ಸೈನಿಕರಲ್ಲದೆ ಬ್ರಿಟಿಶ ಸೈನ್ಯಪಡೆಗಳೂ ಇದ್ದುವು. ತಾಲ್ಮಾ ಹಡಗ ಯುದ್ಧದ ಹಡಗು ಆಗಿರಲಿಲ್ಲ. ಖಾಸಗೀ ಕಂಪನಿಯ ಹಡಗವಾಗಿತ್ತು. ಈಗ ಯುದ್ಧ ನಿಂತಿತ್ತು. ಸೈನಿಕರ ಚಲನವಲನಕ್ಕಾಗಿ ಖಾಸಗೀ ಕಂಪನಿಯ ಹಡಗುಗಳ ನೆರವನ್ನು ಪಡೆಯಬೇಕಿತ್ತು. ನಮ್ಮ ಹಡಗಿನಲ್ಲಿ ಕೆಲ ಭಾರತೀಯ ನಾಗರಿಕರೂ ಇದ್ದರು. ಅವರು ಯುದ್ಧ ನಡೆದಾಗ ಮಲಾಯಾ ಬಿಟ್ಟು ಓಡಿ ಬಂದವ ರಾಗಿದ್ದರು. ಈಗ ಪುನಃ ಮರಳಿ ನಡೆದಿದ್ದರು. ಕೆಲ ಆಂಗ್ಲ ಹೆಣ್ಣುಮಕ್ಕಳೂ ಇದ್ದರು. ಅವರೆಲ್ಲರೂ ನರ್ಸಗಳಾಗಿದ್ದರು. ಹಡಗಿನಲ್ಲಿ ಹೆಚ್ಚಿನ ಸಂಖ್ಯೆ ಗಳಲ್ಲಿದ್ದವರೆಂದರೆ ಸೈನಿಕರೇ ಆಗಿದ್ದರು. ಅವರಲ್ಲಿ ಮುಕ್ಕಾಲುಪಾಲು ಭಾರತೀಯ ಸೈನಿಕರಿದ್ದರು. ಇನ್ನುಳಿದ ಕಾಲುಪಾಲು ಆಂಗ್ಲ ಸೈನಿಕರಿದ್ದರು. ವ್ಯವಸ್ಥಿತ ರೀತಿಯಲ್ಲಿ ಹಡಗವನ್ನೇರಲು ಎರಡು ತಾಸುಗಳು ಬೇಕಾದವು. ನಮನಮಗೆ ನಮ್ಮ ಡೆಕ್ಕುಗಳನ್ನು ತೋರಿಸಲಾಯಿತು.

ಸುಮಾರು ಹನ್ನೊಂದುವರೆ ಘಂಟೆಗೆ ಎಲ್ಲರೂ ಹಡಗವನ್ನೇರಿದರು. ಮಧ್ಯಾಹ್ನದ ಊಟವೂ ಹಡಗಿನಲ್ಲಿಯೇ ಆಯಿತು. ೪!! ಘಂಟೆಗೆ ಹಡಗ ಮದ್ರಾಸದ ಬಂದರದಿಂದ ಕದಲಿತು. ಹಡಗ ಬಿಡುವ ವೇಳೆಗೆ ನಾನು ಅದರ ತುದಿಗೆ ವಾಲಿನಿಂತು, ಮದ್ರಾಸ ಬಂದರವನ್ನು ನೋಡುತ್ತ ನಿಂತಿದ್ದೆ. ಹಡಗ ಬಿಡುವಾಗ ಅದರ ವೇಗ ತೀರ ಕಡಿಮೆ ಇರುತ್ತದೆ. ಬಸವನಹುಳ ಚಲಿಸಿದಂತೆ ಎನಿಸಿತು. ಹಡಗ ಬಂದರದ ಕಟ್ಟೆಯಿಂದ ಕದಲತೊಡಗಿದಾಗ ಒಂದು ಮಾರು ಅಂತರ ಉಳಿದಾಗಿನಿಂದ— ಬಂದರವೇ ಕಣ್ಣಿಗೆ ಕಾಣದಂತಾಗುವವರೆಗೂ ನಾನು ನಿಂತಲ್ಲಿಯೇ ನಿಂತುಕೊಂಡಿದ್ದೆ. ಮುಂದೆ ಮಂಜುಕತ್ತಲೆ ಪಸರಿಸ ತೊಡಗಿತು. ಮದ್ರಾಸ ಪಟ್ಟಣದ ವಿದ್ಯುದ್ದೀಪಗಳು ಮಿನುಗುತ್ತಿದ್ದ ದೃಶ್ಯವೂ ಮೆಲ್ಲನೇ ಕಣ್ಮರೆಯಾಗತೊಡಗಿತು. ನನ್ನ ಹೊಟ್ಟೆಯಲ್ಲಿ ಒಂದು ಬಗೆಯ ಕಳವಳವಾಗುತ್ತಿತ್ತು. ಮದ್ರಾಸ ನನ್ನ ಊರಲ್ಲ. ಧಾರವಾಡದಲ್ಲಿದ್ದಾಗ

ಮದ್ರಾಸದ ಬಗೆಗೆ ಎಳ್ಳಷ್ಟೂ ಆತ್ಮೀಯತೆ ಎನಿಸುತ್ತಿರಲಿಲ್ಲ. ಈಗ ಭಾರತದ ದಂಡೆ ಬಿಟ್ಟು ಪರದೇಶದತ್ತ ಹೊರಟಾಗ ನನಗೆ ಆ ಮದ್ರಾಸ್ ನನ್ನ ಪ್ರೀತಿ ಪಾತ್ರವಾದ ಊರೆನಿಸತೊಡಗಿತು. ಎಷ್ಟಾದರೂ ನನ್ನ ದೇಶದ ನೆಲ— ಮದ್ರಾಸ ಧಾರವಾಡದಿಂದ ದೂರವಿರಬಹುದು. ಆದರೆ ಅದು ಭಾರತದಲ್ಲಿದೆ. ಭಾರತದಿಂದ ಈಗ ದೂರಾಗುತ್ತಿದ್ದೇನೆ. ಪುನಃ ಮರಳಿ ಬರುವ ದಿನ ನಿಶ್ಚಿತ ವಾಗಿ ತಿಳಿದಿಲ್ಲ. ಅಥವಾ ಮರಳಿ ಬರುವ ಸುಯೋಗವಾದರೂ ಇದೆಯೋ ಇಲ್ಲವೊ ದೇವರೇ ಬಲ್ಲ— ಇದೇ ಬಗೆಯ ನೂರಾರು ವಿಚಾರಗಳು ನನ್ನ ತಲೆ ಯಲ್ಲಿ ಸುತ್ತತೊಡಗಿದವು. ಹಾಗೆಯೇ ನಿಂತಲ್ಲಿಯೇ ನಿಂತುಕೊಂಡೆ. ವೇಳೆಯ ಕಡೆ ನನ್ನ ಗಮನವೇ ಇರಲಿಲ್ಲ. ನನ್ನ ಮಾತೃದೇಶ ಬಿಟ್ಟು ಪರದೇಶಕ್ಕೆ ಹೊರಟಿದ್ದೆ. ಒಂದು ಹೊಸ ಅನುಭವ. ಹಾಗೆ ನೋಡಿದರೆ ಈ ಪರದೇಶ ಪ್ರಯಾಣ ಮೊದಲನೆಯದಲ್ಲ. ಬ್ರಹ್ಮದೇಶಕ್ಕೆ ಹೋಗಿಬಂದುದರಿಂದ ಈ ಪ್ರಯಾಣ ಎರಡನೇಯದಾಗಿತ್ತು. ಆದರೂ ಮೊದಲನೆಯ ಪರದೇಶ ಪ್ರಯಾಣದಂತೆಯೇ ಎನಿಸುತ್ತಿತ್ತು. ಅದಕ್ಕೆ ಕಾರಣವೆಂದರೆ ಬರ್ಮಾಕ್ಕೆ ಹೋಗುವಾಗ ನೆಲಮಾರ್ಗವನ್ನೇ ಅವಲಂಬಿಸಿದ್ದೆವು. ಈಗ ಜಲಮಾರ್ಗ. ನನ್ನ ಜೀವನದಲ್ಲಿಯ ಮೊದಲನೆಯ ಜಲಪ್ರವಾಸ. ಈ ಹೊಸ ಅನುಭವ ದಿಂದ ಈ ಪರದೇಶ ಪ್ರಯಾಣಕ್ಕೊಂದು ನಾವಿನ್ಯತೆ ಬಂದಿತ್ತು. ನಿಂತಲ್ಲಿಯೇ ನಿಂತಿದ್ದೆ. ದೃಷ್ಟಿ ಮಾತ್ರ ಭಾರತದತ್ತಲೇ ಇದ್ದಿತು. ಆದರೆ ಭಾರತದ ದಂಡೆ ಆಗಲೇ ಕಣ್ಮರೆಯಾಗಿತ್ತು. ಒಂದೆರಡು ಸಲ ಹುಚ್ಚು ವಿಚಾರಗಳು ಸುಳಿದು ಹೋದವು. ಸಮುದ್ರದಡಿಯಲ್ಲಿ ಹಾಕಿದ ಟಾರ್ಪೇಡುಗಳನ್ನು ತೆಗೆಯಲಾಗಿರ ಲಿಲ್ಲ. ನಾವು ಕುಳಿತ ಹಡಗದ ಹಣೆಯುಬರಹವೇನಿರುವದೋ— ಎಲ್ಲಿಯಾ ದರೂ ಕಡಲ ನೀರನಡುವೆ ತೇಲಾಡುವ ಟಾರ್ಪೋಡೋಗಳಿಗೆ ತುತ್ತಾಗಿ ಜಲ- ಸಮಾಧಿಯನ್ನೈದಿದರೆ? ಅತ್ತಕಡೆಗೂ ಇಲ್ಲ – ಇತ್ತಕಡೆಗೂ ಇಲ್ಲ – ಎನ್ನುವ ಸ್ಥಿತಿ ಬರಬಹುದು. ಭಾರತದ ದಂಡೆ ಅಷ್ಟೇನೂ ದೂರವಿಲ್ಲ. ಈಗಲೇ ಜಿಗಿದು ಈಸಿಕೊಂಡು ಪಾರಾಗಲೇ? ಎಂಬ ಹುಚ್ಚು ವಿಚಾರಗಳು ಸುಳಿದು ಹೋದವು. ಹುಚ್ಚು ವಿಚಾರಗಳೆಂದು ಹೇಳಿದೆನಲ್ಲವೇ? ಕೇವಲ ಹುಚ್ಚು ವಿಚಾರಗಳಲ್ಲ. ಅವು ಅಸಮರ್ಥ— ಕಾರ್ಯರೂಪಕ್ಕಿಳಿಸಲು ಬಾರದಂಥ ವಿಚಾರಗಳೆಂದು ಹೇಳಿದರೇ ಒಳ್ಳೇದು. ಏಕೆಂದರೆ ಬಗ್ಗಿ ಸಾಗರದ ಜಲರಾಶಿ ಯತ್ತ ನೋಡಿದಾಗ ಆ ಧೈರ್ಯ ಎಲ್ಲಿಂದ ಬರಬೇಕು? ಸಾಗರದ ಆ

ಮಹಾನ್ ತೆರೆಗಳ ರಭಸ-- ನನ್ನ ವಿಚಾರ; ಒಂದು ಕ್ಷಣ ನಕ್ಕುಬಿಟ್ಟೆ. ಮತ್ತೆ ಗಂಭೀರನಾದೆ. ಒಮ್ಮೆಲೇ ವೀರ ಸಾವರಕರರ ನೆನಪು ಬಂದಿತು. ಆ ವ್ಯಕ್ತಿಯ ಧೈರ್ಯ ಎಂತಹದಿರಬೇಕು. ಸಮುದ್ರದ ರುದ್ರ ಗಭೀರ ತೆರೆಗಳ ತಾಂಡವ ನೃತ್ಯದ ನಡುವೆ ಧುಮ್ಮುಕ್ಕಿ, ಹೋರಾಡಿ ಈಸಾಡಿದ ಮಹಾನುಭಾವನ ಧೈರ್ಯದ ಬೆಲೆ ಆ ಸ್ಥಿತಿಯಲ್ಲಿ ನಿಂತುಕೊಂಡೇ ತಿಳಿದುಕೊಳ್ಳಬೇಕು. ಕನ್ನಡ ಮುಲ್ಕೀ ಕ್ಲಾಸಿನಲ್ಲಿ ಓದುತ್ತಿದ್ದಾಗ ಸಾವರಕರರ ಚರಿತ್ರೆಯನ್ನು ಓದಿದ್ದೆ. ಆಗ ಅವರ ಧೈರ್ಯದ ಬೆಲೆ ಗೊತ್ತಾಗಿದ್ದರೂ ಸರಿಯಾಗಿ ತಿಳಿದಿರಲಿಲ್ಲ. ಈಗ ಅದರ ಸರಿಯಾದ ಬೆಲೆ ತಿಳಿದಿತ್ತು.

ಈ ವಿಚಾರಗಳ ತಂದ್ರಿಯಲ್ಲಿ ಸಿಲುಕಿದ ನನಗೆ ವೇಳೆಯ ಕಡೆಗೆ ಗಮನ ವಿರಲಿಲ್ಲ. ನನ್ನ ಬೆನ್ನಮೇಲೊಂದು ಕೈ ಬಿದ್ದಿತು. ಹೊರಳಿ ನೋಡಿದೆ. ಡ್ಯೂಟಿಯ ಮೇಲೆ ಇದ್ದ ಆಂಗ್ಲ ಸಾರ್ಜಂಟ ಬಂದು ನಿಂತಿದ್ದ.

"Why are you standing here alone?"

"Simply"

"Come on go to your deck. It's nine o'clock"

"Thank you"

ನಾನು ನೇರವಾಗಿ ನನ್ನ ಡೆಕ್‌ದತ್ತ ನಡೆದೆ. ನನ್ನ ಡೆಕ್‌ದ ಸ್ಥಿತಿಗತಿ ಯನ್ನು ಹೇಳುವ ಮುಂಚೆ ನಮ್ಮ ಹಡಗ "ತಾಲ್ಮಾ" (Talma) ದ ಪರಿಚಯ ಮಾಡಿಕೊಡಬೇಕಾಗುತ್ತದೆ.

ಹಡಗದ ಮೇಲ್ಭಾಗದಲ್ಲಿ ಮೂರು ಅಂತಸ್ತುಗಳಿದ್ದವು. ಹಾಗೆ ಕೆಳಭಾಗಕ್ಕೆ ಮೂರು ಅಂತಸ್ತುಗಳಿದ್ದವು.— ತೀರ ಕೆಳಗಿನ ಅಂತಸ್ತಿನಲ್ಲಿ ಸ್ಟೋರನ್ನು ತುಂಬ ಲಾಗಿತ್ತು. ಹಡಗದ ಮೇಲ್ಭಾಗದ ಮೂರನೇಯ ಅಂತಸ್ತಿನಲ್ಲಿ ಕೇವಲ ಅಧಿಕಾರಿಗಳು, ನರ್ಸುಗಳು, ಮತ್ತೆ ಕೆಲವು ಹಡಗದ ಅಧಿಕಾರಿಗಳು ಇತ್ಯಾದಿ- ಎರಡನೇ ಅಂತಸ್ತಿನಲ್ಲಿ ನಮ್ಮ ಭಾರತೀಯ ಸೈನ್ಯಾಧಿಕಾರಿಗಳು, ಆಫೀಸು, ಮತ್ತು ಆಸ್ಪತ್ರೆ. ಮೂರನೆಯದು ಅಂದರೆ ನಟ್ಟನಡುವಿನ ಭಾಗ ತೀರ ತೆರ ವಾದದ್ದು. ಅಂದರೆ ಅಲ್ಲಿ ಒಂದು ಡ್ರಾಯ ಕ್ಯಾಂಟೀನ ಮತ್ತು ವೆಟ್ ಕ್ಯಾಂಟೀನು, ರಿಕ್ರಿಯೇಶನ್ ರೂಮುಗಳಿದ್ದವು. ಡ್ರಾಯ ಕ್ಯಾಂಟೀನವೆಂದರೆ ಸ್ಟೇಶನರೀ ಅಂಗಡಿ. ವೆಟ್ ಕ್ಯಾಂಟೀನವೆಂದರೆ ಚಹ ಕಾಫಿಯ ಅಂಗಡಿ.

ರಿಕ್ರಿಯೇಶನ್ ರೂಮಿನಲ್ಲಿ ಆಟಪಾಟ, ರೇಡಿಯೋ, ಮತ್ತೆ ಕೆಲವು ಕೇರಮ್ ಬೋರ್ಡುಗಳನ್ನು ಇಡಲಾಗಿತ್ತು. ನಾವೆಲ್ಲರೂ ಇಲ್ಲಿಯೇ ಇಡಿಯ ದಿನವನ್ನು ಕಳೆಯುತ್ತಿದ್ದೆವು. ನಾವಿರುವ ಡೆಕ್ಕು ತೀರ ಕೆಳಗೆ ಇದ್ದುದರಿಂದ ಅಲ್ಲಿ ಸೆಕೆ ಬಹಳವಾಗುತ್ತಿತ್ತು. ಮೊದಲೊಂದು ದಿನ ಹೇಗೋ ಮಲಗಿದೆ. ಮುಂದೆ ರಿಕ್ರಿಯೇಶನ್ ರೂಮಿನಲ್ಲಿ ಬಂದು ಮಲಗತೊಡಗಿದೆವು. ಯಾರೂ ಅದಕ್ಕೆ ಅಡ್ಡಿ ಮಾಡಲಿಲ್ಲ. ಹಡಗಿನಲ್ಲಿ ದಿನದ ಕಾರ್ಯಕ್ರಮವೆಂದರೆ— ಮುಂಜಾನೆ ೫॥ ಘಂಟೆಗೆ ಎದ್ದು ಮುಖಮಾರ್ಜನ- ಸ್ನಾನಗಳನ್ನು ತೀರಿಸಿಕೊಳ್ಳುತ್ತಿದ್ದೆವು. ಸ್ನಾನಕ್ಕಾಗಿ ಕ್ಯೂ ನಿಲ್ಲಬೇಕಾಗುತ್ತಿತ್ತು. ಏಕೆಂದರೆ ಮುಂಜಾನೆ ೫॥ ಯಿಂದ ೭ ಘಂಟೆಯ ವರೆಗೆ ಮಾತ್ರ ಸಿಹಿನೀರಿನ ನಲ್ಲಿ ಇರುತ್ತಿತ್ತು. ಮುಂದೆ ಇಡೀ ದಿನ ಸಮುದ್ರದ ನೀರೇ ನೀರು. ಹೀಗಾಗಿ ಎಲ್ಲರೂ ಸ್ನಾನಕ್ಕಾಗಿ ಧಡಪಡಿಸುವವರೇ. ಒಮ್ಮೆ ಸ್ನಾನ ಮುಗಿಸಿಕೊಂಡ ನಂತರ ೭॥ ಘಂಟೆಗೆ ಚಹ ಸಿಗುತ್ತಿತ್ತು. ಅಲ್ಲಿಯವರೆಗೆ ತಡೆಯದವರು ಕಾಂಟೀನನಲ್ಲಿ ದುಡ್ಡು ತೆತ್ತಿ ಚಹ ಕುಡಿದು ಬರುತ್ತಿದ್ದರು. ೭॥ ಘಂಟೆಗೆ ಪಿ. ಟಿ. ( ಫಿಜಿಕಲ್ ಟ್ರೇನಿಂಗ ). ೮ ಘಂಟೆಗೆ ಸಫಾಯಿ ಡ್ಯೂಟಿ. ಎಲ್ಲ ಸೈನಿಕರು ತಮ್ಮ ತಮ್ಮ ಡೆಕ್ಕುಗಳನ್ನು ನೀರು ಹಾಕಿ ತೊಳೆದು ಸ್ವಚ್ಛವಾಗಿರಿಸತಕ್ಕದ್ದು. ಸಮುದ್ರದ ನೀರಿನ ಪೂರೈಕೆ ಸಾಕಷ್ಟು ಇದ್ದಿತಾದ್ದರಿಂದ ನಾವೆಲ್ಲ ನಮ್ಮ ಡೆಕ್ಕುಗಳನ್ನು ತೊಳೆದು ಸ್ವಚ್ಛವಾಗಿರಿಸುತ್ತಿದ್ದೆವು. ಮುಂದೆ ಸುಮಾರು ಹತ್ತು ಘಂಟೆಗೆ ಹಡಗದ ಕ್ಯಾಪ್ಟನ್ ಎಲ್ಲ ಡೆಕ್ಕುಗಳ ಸ್ವಚ್ಛತೆಯನ್ನು ನೋಡಿಕೊಂಡು ಹೋಗುತ್ತಿದ್ದ. ಆನಂತರ ಇಡೀ ದಿನ ಕೇಳುವವರೇ ಇಲ್ಲ. ಮಧ್ಯಾನ್ಹ ೧ ಘಂಟೆಗೆ ಊಟ, ಮಧ್ಯಾನ್ಹ ೪ ಘಂಟೆಗೆ ಚಹ, ರಾತ್ರಿ ೮ ಘಂಟೆಗೆ ಊಟ. ಸಿಪ್‌ಕ್ಯಾಪ್ಟನ್ ಸ್ವಚ್ಛತೆಯ ಪರೇಡನ್ನು ಮುಗಿಸಿದ ನಂತರ ನಮ್ಮನ್ನು ಮುಂದೆ ಕೇಳುವವರೇ ಇಲ್ಲ. ಎಲ್ಲರೂ ರಿಕ್ರಿಯೇಶನ್ ರೂಮನ್ನು ಸೇರಿ ಕೇರಮ್ಮ, ಇಸ್ಪೀಟ ಮುಂತಾದ ಆಟಗಳಲ್ಲಿ ತಲ್ಲೀನರಾಗುತ್ತಿದ್ದರು. ಅಲ್ಲಿ ಒಂದು ವಾಚನಾಲಯವೂ ಇದ್ದಿತು. ವಾಚನಾಲಯದಲ್ಲಿ ಎಲ್ಲವೂ ಇಂಗ್ಲಿಷ ಪುಸ್ತಕಗಳೇ ಇದ್ದವು. ಕೆಲವು ಹಳೆಯ ಇಂಗ್ಲಿಷ ಮಾಸಪತ್ರಿಕೆಗಳೂ ಇದ್ದವು. ನನಗೆ ಇಸ್ಪೀಟು ಆಟದ ಕಡೆಗೆ ಮನಸ್ಸೇ ಓಡುತ್ತಿರಲಿಲ್ಲ. ಕನ್ನಡ ಬಿಟ್ಟು ಬೇರೆ ಭಾಷೆಗಳ ಪುಸ್ತಕ ಓದುವ ಚಟ ಮೊದಲಿರಲಿಲ್ಲ. ಆದರೆ ಇಲ್ಲಿ ವೇಳೆ ಕಳೆಯುವ ಪ್ರಶ್ನೆ ಇದ್ದುದರಿಂದ ಒಂದು ಇಂಗ್ಲೀಷ ಕಾದಂಬರಿಯನ್ನು ತೆಗೆದುಕೊಂಡು ಓದಲು ಮೊದಲು

ಮಾಡಿದೆ. ೪-೫ ದಿನಗಳಲ್ಲಿ ಆ ಕಾದಂಬರಿಯನ್ನು ಮುಗಿಸಿದೆ. ನನ್ನ ಜೀವನ ದಲ್ಲಿ ಮೊಟ್ಟಮೊದಲಿಗೆ ಇಂಗ್ಲಿಷ ಕಾದಂಬರಿಯನ್ನು ಓದಿದ್ದು ಅದೇ ಮೊದಲು.

ಇದು ಹಡಗ ಮತ್ತು ದೈನಂದಿನ ಕಾರ್ಯಕ್ರಮಗಳ ಪರಿಚಯವಾಯಿತು. ಆ ಆಂಗ್ಲ ಸಾರ್ಜಂಟ ಬಂದು ನನಗೆ ನನ್ನ ಡೆಕ್‌ಗೆ ಹೋಗಲು ತಿಳುಹಿಸಿದ ಮೇರೆಗೆ ನನ್ನ ಡೆಕ್‌ನ್ನು ಸೇರಿದೆ. ನನ್ನ ಹಾಸಿಗೆ ಇರಿಸಿದ ಸೆಲ್ಫಿನಲ್ಲಿಯೇ ಹಾಸಿಗೆಯನ್ನು ಬಿಡಿಸಿ ಮಲಗಿಕೊಂಡೆ. ಎಷ್ಟು ಪ್ರಯತ್ನ ಮಾಡಿದರೂ ನಿದ್ದೆ ಬರಲಿಲ್ಲ. ಸೆಕೆಯು ತಾಪವಲ್ಲದೇ ಒಂದು ವಿಚಿತ್ರ ಸಪ್ಪಳ— ಅದೇ ಸಾಗರದ ಜಲರಾಶಿಯ ಗುಂಗಾನ. ಒಳಗೆ ಗಾಳಿಯನ್ನು ನೀಡುವ ಬಂಬುಗಳ ವಿಚಿತ್ರ ಸ್ವರ. ಎಲ್ಲ ಹೊಸ ಅನುಭವಗಳ ಮೂಲಕ ನಿದ್ದೆಯೇ ಬರಲಿಲ್ಲ. ಒಳಬದಿ ಯಲ್ಲಿ ವಿದ್ಯುದ್ದೀಪಗಳಿದ್ದವು. ಬೆಳಕು ಇದ್ದುದರ ಮೂಲಕ ಕಣ್ಣನ್ನು ತೆರೆದಿಟ್ಟು ಕೊಂಡೇ ಮಲಗಿಕೊಂಡೆ.

ಒಂದು ಸಲ ಸುತ್ತೆಲ್ಲ ಕಣ್ಣನ್ನು ಹೊರಳಿಸಿದೆ. ಎಲ್ಲರೂ ಮಲಗಿದ್ದುದು ಕಂಡಿತು– ಆದರೆ ಎಲ್ಲರಿಗೂ ನಿದ್ರೆ ಬಂದುದು ಗೊತ್ತಾಗಲಿಲ್ಲ. ಸಾಗರ ಶಾಂತ ಸ್ಥಿತಿಯಲ್ಲಿದ್ದುದರಿಂದ ಅಂದು ಯಾರಿಗೂ 'Sea sickness' ತಗುಲಲಿಲ್ಲ. ಹಡಗಿನ ವೇಗವೂ ಹೇಳಿಕೊಳ್ಳುವಷ್ಟು ಹೆಚ್ಚಿನದಾಗಿರಲಿಲ್ಲ. ಅದೇ ಮಹಾ ಯುದ್ಧ ಮುಗಿದಿದ್ದುದರ ಮೂಲಕವಾಗಿ ಸಾಗರದ ದಾರಿ ಪ್ರವಾಸಕ್ಕೆ ಸುಗಮ ವಾಗಿರಲಿಲ್ಲ. ಶತ್ರುಗಳೂ ಮಿತ್ರರೂ ಕೂಡಿ ತಮ್ಮ ತಮ್ಮ ಶತ್ರುಗಳ ಹಡಗ ಗಳು ನಾಶವಾಗಲೆಂಬ ಉದ್ದೇಶದಿಂದ ತೇಲಿಬಿಟ್ಟ ಟಾರ್ಪೇಡೊಗಳನ್ನು ತೆಗೆ ಯುವ ಕೆಲಸ ಇನ್ನೂ ನಡೆದೇ ಇತ್ತು. ಇನ್ನೂ ಟಾರ್ಪೇಡೋಗಳ ಸಂಶಯ ವಿದ್ದುದರಿಂದ ಈ ಹಡಗ ಸರಿಯಾದ ದಾರಿಯಿಂದ ಹೋಗದೇ ಕೊಂಚ ಅಡ್ಡ ತಿಡ್ಡವಾಗಿಯೇ ಹೊರಟಿತ್ತು. ಹೀಗಾಗಿ ಪ್ರವಾಸ ಮಾಡುವ ದಿನಗಳ ಅವಧಿ ಬೆಳೆಯುತ್ತಿತ್ತೆ ವಿನಃ ಸುರಕ್ಷಿತತೆಯ ಸಂಭವ ಹೆಚ್ಚಾಗುತ್ತಿತ್ತು.

ಹಡಗಿನಲ್ಲಿ ಇನ್ನೊಂದು ಸುವ್ಯವಸ್ಥೆ ಎಂದರೆ— ಪ್ರತಿ ಡೆಕ್‌ನಲ್ಲಿ ಒಂದೊಂದು ಲೌಡ್‌ಸ್ಪೀಕರುಗಳಿರುತ್ತವೆ. ಏನಾದರೂ ಹುಕುಮು ಕೊಡ ಬೇಕಾದರೆ, ಹಡಗದ ಮುಖ್ಯ ಕಾರ್ಯಾಲಯದಿಂದ ಮಾತಾಡಿದರೆ ಸಾಕು— ಅದು ಹಡಗದ ಪ್ರತಿ ಮೂಲೆಗೆ ಮುಟ್ಟುವ ವ್ಯವಸ್ಥೆ ಇದ್ದಿತು.

ಪ್ರವಾಸದ ಮೊದಲನೇ ದಿನ ಏನೂ ಘಟನೆ ಇಲ್ಲದೆ ಸಂದಿತು. ಎರಡನೇ ದಿನ ಕೆಲ ಜನರಿಗೆ Sea sickness ತಲೆದೋರತೊಡಗಿತು. ಮೇಲಾಗಿ

ಸಾಗರವೂ ರೊಚ್ಚಿಗೆದ್ದಿತ್ತು. ಹೀಗಾಗಿ ಹಡಗ ಉಯ್ಯಾಲೆಯಾಡುತ್ತ ಮುಂದೆ ನಡೆದಿತ್ತು. ಊಟ ಮಾಡಿದಾಕ್ಷಣ ಹೊಟ್ಟೆಯಲ್ಲಿ ಸಂಕಟವಾಗತೊಡಗಿತ್ತು. ಭರ್ತಿ ಊಟ ಮಾಡಿ ಜೋಕಾಲಿ ಆಡತೊಡಗಿದರೆ ಆಗುವ ಅವಸ್ಥೆಯಂತೆ ನಮ್ಮ ಸ್ಥಿತಿಯಾಗತೊಡಗಿತು. ಹಡಗದಲ್ಲಿ ಏರಿದಾಕ್ಷಣ ಪ್ರತಿಯೊಬ್ಬರಿಗೂ ಲಾಯಿಫ್ ಜಾಕೆಟ ಕೊಡಲಾಗಿತ್ತು. ಆ ಲಾಯಿಫ್ ಜಾಕೇಟ ಯಾವಾಗಲೂ ತಮ್ಮ ಹತ್ತಿರವೇ ಇಟ್ಟುಕೊಳ್ಳತಕ್ಕದ್ದು ಎಂಬ ಕಟ್ಟಾಜ್ಞೆ ಇರುತ್ತಿತ್ತು. ಅದನ್ನು ಗಟ್ಟಿಯಾಗಿ ಕಟ್ಟಿಕೊಂಡು ಬಿಡುತ್ತಿದ್ದೆ. ಅಂದರೆ ಹೊಟ್ಟೆಯಲ್ಲಿ ಆಗುವ ಸಂಕಟ ಸ್ವಲ್ಪ ಕಡಿಮೆಯಾದಂತೆ ಅನಿಸುತ್ತಿತ್ತು. ಲಾಯಿಫ್ ಜಾಕೆಟ್ಟಿನ ಮುಖ್ಯ ಉದ್ದೇಶವಿದ್ದುದು ಬೇರೆ. ಒಂದುವೇಳೆ ಹಡಗಿಗೆ ಧಕ್ಕೆ ತಗಲಿದರೆ, ಅಥವಾ ಮುಳುಗತೊಡಗಿದರೆ ಈ ಲಾಯಿಫ್ ಜಾಕೆಟ್ ೨೪ ತಾಸುಗಳ ವರೆಗೆ ಮನುಷ್ಯ ನನ್ನು ನೀರಲ್ಲಿ ಮುಳುಗಿಸುವದಿಲ್ಲ. ಈ ೨೪ ತಾಸುಗಳಲ್ಲಿ ಮತ್ತಾವ ಸಾಧನ ದೊರಕಿದರೆ ಅಥವಾ ಪಾರುಮಾಡುವ ವಿಮಾನು ಅಥವಾ ಹಡಗುಗಳು ಬಂದರೆ ಅಲ್ಲಿಂದ ಪಾರಾಗಬಹುದು.

ಪ್ರವಾಸದ ಎರಡನೇ ದಿನವೂ ಕೇವಲ 'ಸೀಸಿಕ್‌ನೆಸ್' ಒಂದೆರಡು ಕೇಸುಗಳ ಹೊರತಾಗಿ ಮತ್ತೆಲ್ಲವೂ ಸುಸೂತ್ರವಾಗಿ ಸಾಗಿತು. ಮೂರನೇ ದಿನ ಬೆಳಗಾಯಿತು. ಈಗೆರಡು ದಿನಗಳಿಂದಲೂ ನಮಗೆ ನೀರು ಆಕಾಶದ ಹೊರತು ಮತ್ತೇನೂ ದೃಷ್ಟಿಗೆ ಬೀಳಲಿಲ್ಲ. ಮನಸ್ಸಿಗೆ ತುಂಬಾ ಬೇಜಾರಾಗಿತ್ತು. ಎಂದಿನಂತೆ ದೈನಂದಿನ ಕಾರ್ಯಕ್ರಮಗಳು ನಡೆದು ರಾತ್ರಿ ೧೦ ಘಂಟೆಗೆ ಮಲ ಗಿದೆವು. ಸುಮಾರು ರಾತ್ರಿ ೧೧ ಹೊಡೆದಿರಬೇಕು. ಡ್ಯೂಟಿಯಮೇಲಿದ್ದ ಜನರನ್ನಷ್ಟು ಬಿಟ್ಟು ಉಳಿದವರೆಲ್ಲ ಗಾಢ ನಿದ್ರೆಯಲ್ಲಿದ್ದರು. ಹಡಗ ಒಮ್ಮಿಂದೊ ಮ್ಮೆಲೆ ಮೇಲೆ ಬಂದಂತಾಗಿ ಮತ್ತೆ ನೀರಿಗೆ ಅಪ್ಪಳಿಸಿದಂತಾಯಿತು. ಒಳಗೆ ಮಲಗಿದವರಿಗೆ ಸ್ವಲ್ಪ ಮೇಲೆ ತೂರಿದಂತೆ ಭಾಸವಾಯಿತು. ತೀರಿತು ಹಡ ಗದ ತುಂಬ ಒಂದೇ ಕೋಲಾಹಲವೆದ್ದಿತು. ಮೊದಲೇ ಜನರಲ್ಲಿ ಒಂದು ಬಗೆಯ ಹೆದರಿಕೆ ಇರುವದರಿಂದ ಇಂಥ ಘಟನೆಯಿಂದ ಆ ಹೆದರಿಕೆ ಹೆಚ್ಚಾಗು ತ್ತದೆ. ಈ ಹೆದರಿಕೆಗೆ ಪುಷ್ಟಿ ಕೊಡುವ ಹಾಗೆ ಹಡಗದ ದೀಪಗಳೆಲ್ಲ ಆರಿದವು. ಸೈನಿಕರ ಹೆದರಿಕೆ ಮತ್ತಿಷ್ಟು ಹೆಚ್ಚಿತು.

ಒಮ್ಮಿಂದೊಮ್ಮೆಲೆ ಲೌಡ್‌ಸ್ಪೀಕರಿನಲ್ಲಿಂದ ಹುಕುಮು ಹೊರಟಿತು. "ಎಲ್ಲರೂ ಲಾಯಿಫ್ ಜಾಕೆಟ ಕಟ್ಟಿಕೊಂಡು ವಾಟರ್ ಬಾಟಲಿನಲ್ಲಿ ನೀರು

ತುಂಬಿಕೊಂಡು ತಮ್ಮ ತಮ್ಮ ಡೆಕ್ಕುಗಳಲ್ಲಿಯೇ ನಿಂತುಕೊಳ್ಳಬೇಕು. ಅಲ್ಲಿಂದ ಯಾರೂ ಒಂದು ಇಂಚು ಕದಲತಕ್ಕದ್ದಲ್ಲ. ಈ ಪ್ರಕಟನೆಯಿಂದ ಸೈನಿಕರೆಲ್ಲರೂ ಹತಾಶರಾದರು. ಇನ್ನೇನು ನಮ್ಮ ಜೀವಮಾನ ಒಂದು ಗಂಟೆ ಮಾತ್ರ ಎಂಬ ನಿರಾಶಾವಾದ, ಕರುಣಾಜನಕ ಕಳೆ ಎಲ್ಲರ ಮುಖದಮೇಲೆ ಪಸರಿಸಿತ್ತು. ನನಗೂ ಒಮ್ಮೆ ಈ ವಿಚಾರ ಸುಳಿದುಹೋಯಿತು. ಆದರೂ ಯಾವದೋ ಒಂದು ಧೈರ್ಯ. ಅದನ್ನು ಧೈರ್ಯವೆಂದು ಕರೆಯಬೇಕೊ? ಸಾಯುವವನು ನಾನೊಬ್ಬನೇ ಅಲ್ಲ. ಸಾವಿರಾರು ಸೈನಿಕರಿದ್ದಾರೆ— ಈ ಸೈನಿಕರ ನಡುವೆ ನಾನೊಬ್ಬ! ಇಷ್ಟೆ ತಾನೆ, ಎಂಬಾದೇ ಆ ಧೈರ್ಯ. ಮದ್ರಾಸ್ ರೆಸ್ಟ ಕ್ಯಾಂಪಿನಲ್ಲಿ ಸುಮ್ಮನೇ ಡಾಕ್ಟರರ ಸರ್ಟಿಫಿಕೆಟ ಪಡೆದು ಈ ಹಡಗಿನಲ್ಲಿ ಪ್ರಯಾಣಿಸಿದೆ. ಇದು ಒಳಿತಾಗಲಿಲ್ಲ ಎಂಬ ವಿಚಾರವೂ ಸುಳಿದುಹೋಯಿತು. ಅಲ್ಲಾಬಾದಿನಲ್ಲಿ ಒಬ್ಬ ಭವಿಷ್ಯವಾದಿ ಸಿಕ್ಕಿದ್ದ. ಆತ ನನ್ನ ಕೈ ನೋಡಿ ಹೇಳಿದ್ದ.– "ನಿಮ್ಮ ಮರಣ ಮಾತೃ ಭೂಮಿಯಲ್ಲಿ ಇಲ್ಲ- ಮಾತೃ ಭೂಮಿಯ ಹೊರಗೆ ನಿಮ್ಮ ಮರಣವಿದೆ."

ಅಂಥ ಕೆಟ್ಟ ವಿಚಾರಗಳೆಲ್ಲ— ಒಂದು ಸಲವಲ್ಲ, ಸಾವಿರಸಲ ಸುಳಿದು ಹೋದುವು. ಒಂದುಸಲ ಮನೆಯ ಜನರೆಲ್ಲರ ನೆನಪು ಬಂದುಹೋಯಿತು. ಅಕ್ಕ-ತಮ್ಮಂದಿರು-ತಂದೆ. ಮನೆಯಿಂದ ಇಷ್ಟು ದೂರ— ಮನೆಯಿಂದಲ್ಲ— ದೇಶದಿಂದ ಇಷ್ಟು ದೂರ, ನನ್ನ ಮರಣ ಬರುವದೆಂದರೆ ದುರ್ದೈವ. ಆದೂ ಹತ್ತಿರ ಯಾರೂ ಬಳಗದವರಿಲ್ಲ. ಮನೆಯ ಒಂದು ಗ್ರುಫ್ ಫೋಟೊ ಹತ್ತಿರವಿಟ್ಟುಕೊಂಡಿದ್ದೆ. ಅದನ್ನು ಚೀಲ (ಹ್ಯಾವರ ಸ್ಯಾಕ್) ದಿಂದ ತೆಗೆದು ಕಡ್ಡಿಯನ್ನು ಕೊರೆದು ಅದರ ಬೆಳಕಿನಲ್ಲಿ ನೋಡಿಕೊಂಡೆ. ಪ್ರತಿ ಸೈನಿಕ ಹೀಗೆಯೇ ಒಂದೊಂದು ಬಗೆಯ ಕುವಿಚಾರಗಳ ಗೊಂದಲದಲ್ಲಿ ಸಿಲುಕಿ ಕೊಂಡಿದ್ದ. ಆದರೆ ಬೇರೆ ಸೈನಿಕನತ್ತ ಗಮನಕೊಡುವ ಸ್ಥಿತಿಯಲ್ಲಿ ಯಾರೂ ಇರಲಿಲ್ಲ. ಇಂಥ ಸ್ಥಿತಿಯಲ್ಲಿ ಪ್ರಯಾಣ ಮಾಡುತ್ತಿದ್ದ ಹಡಗ ಒಮ್ಮಿಂದೊಮ್ಮೆಲೆ ನಿಂತುಬಿಟ್ಟಿತು.

ಹಡಗ ನಿಂತಾಕ್ಷಣ ಸೈನಿಕರೆಲ್ಲರೂ ಘಾಬರಿಯಾದರು. ಇನ್ನು ಹಡಗ ಮುಳುಗುವದು ನಿಶ್ಚಿತವೆಂದು ಬಗೆದರು. ಮರಣದಂಡನೆ ವಿಧಿಸಿದ ಕೈದಿಗೆ ನಾಲ್ಕು ದಿನಗಳ ಅವಧಿ ಇತ್ತಾಗ, ಆ ಮನುಷ್ಯನ ಮುಖಲಕ್ಷಣಗಳೇ ಈ ಸೈನಿಕರನ್ನು ಆವರಿಸಿದ್ದವು. ಸೈನಿಕರೆಲ್ಲ ಅರ್ಧ ಸತ್ತಂತೆಯೇ ಆಗಿದ್ದರು.

ಅಷ್ಟರಲ್ಲಿ ಎರಡು ವಿಮಾನಗಳು ಹಡಗದಮೇಲೆ ಸುತ್ತಾಡಿ ಹಡಗದ ಬದಿಯಲ್ಲಿಯೇ ನೀರಲ್ಲಿಳಿದವು. ಅದರೊಳಗಿಂದ ಕೆಲ ಜನ ಹಡಗವನ್ನೇರಿದರು. ಮುಂದೆ ಒಂದರ್ಧ ತಾಸಿನಲ್ಲಿಯೇ ಹಡಗದ ದೀಪಗಳು ಹತ್ತಿಕೊಂಡವು.

ಸೈನಿಕರಲ್ಲಿ ಸಂಜೀವನೀ ಸಂಚರಿಸಿದಂತಾಯಿತು. ೫ ನಿಮಿಷದ ಹಿಂದೆ ಆವರಿಸಿದ ರುದ್ರ ಭಯಾನಕ ಕಳೆ ಈಗಿರಲಿಲ್ಲ. ನಿರಾಶೆಯಲ್ಲಿಯೇ ಆಶೆ ಮೂಡತೊಡಗಿತು. ಮುಂದೆ ಒಂಪು ತಾಸಿನಲ್ಲಿ ಹಡಗ ಮತ್ತೆ ಪ್ರವಾಸ ಪ್ರಾರಂಭಿಸಿತು. ಲೌಡ್‌ಸ್ಪೀಕರಿನಲ್ಲಿ "No Danger" ಸಾರಲಾಯಿತು.

ಎಲ್ಲರೂ ಒಂದು ಕುತ್ತಿನಲ್ಲಿಂದ ಪಾರಾದವರಂತೆ ಒಂದು ದೀರ್ಘ ನಿಟ್ಟುಸುರುನ್ನು ಬಿಟ್ಟು ಮಲಗಿದರು. ಮರುದಿನ ಬೆಳಿಗ್ಗೆ ಆದ ಸಂಗತಿ ತಿಳಿಯಿತು. ಸಾಗರದ ಅಡಿಯಲ್ಲಿ ತೇಲುತ್ತಿದ್ದ ಹಳೆಯ ಟಾರ್ಪೀಟ ಹಡಗದಿಂದ ಕೊಂಚ ದೂರ ಸ್ಫೋಟವಾಗಿತ್ತು- ಅದರ ಸ್ವಲ್ಪ ಧಕ್ಕೆಯಿಂದ ಹಡಗ ಒಳಭಾಗದ ಇಂಜೆನ್ನಿಗೆ ಎಲ್ಲಿಯೋ ಧಕ್ಕೆ ತಗಲಿತ್ತು. ಇಷ್ಟೇ, ಅದನ್ನು ಸರಿಪಡಿಸಿದ ನಂತರ ಹಡಗ ಮತ್ತೆ ಪ್ರಾರಂಭವಾಯಿತು. ಟಾರ್ಪೇಡೊ ಸರಿಯಾಗಿ ಹಡಗದ ಬುಡದಲ್ಲಿಯೇ ಸ್ಫೋಟಾಗಿದ್ದರೆ ಜಲಸಮಾಧಿ ಗೈಯುತ್ತಿದ್ದೆವು.

ಮುಂದೆ ಮೂರ ದಿನಗಳವರೆಗೆ ಯಥಾಸ್ಥಿತಿಯಂತೆ ಸಾಗಿತ್ತು ಪ್ರವಾಸ. ೫ನೇ ದಿನ ಮುಂಜಾನೆ ಅಂದಮಾನ ನಡುಗಡ್ಡೆಗಳು ಕಾಣತೊಡಗಿದವು. ಸತತವಾಗಿ ೧೨೦ ತಾಸುಗಳ ವರೆಗೆ ಕೇವಲ ಆಕಾಶ—ನೀರು ಇವುಗಳನ್ನಷ್ಟೇ ನೋಡಿ ನೋಡಿ ಬೇಸತ್ತು ನಮಗೆ ದೂರಿನಿಂದ ನೆಲವನ್ನು ಕಂಡಾಗ ಒಂದು ಬಗೆಯ ಹರ್ಷವುಂಟಾಯಿತು. ಎಲ್ಲರೂ ಬಗ್ಗಿ ಬಗ್ಗಿ ಆ ನಡುಗಡ್ಡೆಗಳತ್ತ ನೋಡತೊಡಗಿದರು. ಸಾವಿರಾರು ವರುಷದಿಂದ ನೆಲ ನೋಡದೇ ಇದ್ದವರಂತೆ ಆಗಿದ್ದಿತು ಆ ಸೈನಿಕರ ಸ್ಥಿತಿ. ನಾನೂ ಎಲ್ಲ ಸೈನಿಕರಂತೆ ಅಂದ ಮಾನ ನೋಡತೊಡಗಿದ್ದೆ. ಆ ನಡುಗಡ್ಡೆಗಳತ್ತ ನೋಡುತ್ತಿರುವಂತೆ ನನ್ನ ಮನಸ್ಸಿನಲ್ಲಿ ಹಲವಾರು ವಿಚಾರಗಳು ಸುಳಿದಾಡತೊಡಗಿದವು.

ತನ್ನ ಹೆಸರಿನಲ್ಲಿಯ ಅಂದತನವನ್ನು ಕಳೆದುಕೊಂಡು ಮಾನಗೇಡಿಯಾಗಿ ನಿಂತಿರುವಂತೆ ಭಾಸವಾಯಿತು. ಅಂದಮಾನ ದ್ವೀಪಗಳು ಅದರ ಹಿನ್ನೆಲೆ ಎಷ್ಟೇ ಅಂದವಾಗಿದ್ದರೂ ಈ ನಡುವೆ ಅದು ಕೈದಿಗಳ ವಾಸಸ್ಥಾನವಾಗಿ ಭಯಾನಕ ರೂಪ ತಳೆದು ನಿಂತುಕೊಂಡಿತ್ತು. ಕನ್ನಡದ ಪ್ರಸಿದ್ಧ ಇತಿಹಾಸ

ಕಾರರು "ಅಂದವಮಾನ"ವನ್ನು 'ಹನುವಮಾನ್' ಎಂಬ ಪವಿತ್ರ ಶಬ್ದರಿಂದ ಹೊಸ ರೂಪ ಧರಿಸಿ ಅಂದವಮಾನವಾಗಿದೆಯೆಂದು ವಿವರಿಸಿದ್ದನ್ನು ಓದಿದ್ದೆ. ಕಾಲನ ದವಡೆಗಳಲ್ಲಿ ಎಷ್ಟೋ ತಿಪ್ಪೆಗಳು ಉಪ್ಪರಿಗೆಯಾಗಿವೆ. ಉಪ್ಪರಿಗೆಗಳು ತಿಪ್ಪೆಗಳಾಗಿವೆ.

ಮಹಾಯುದ್ಧ ಪ್ರಾರಂಭವಾದ ನಂತರ, ಪೂರ್ವದಲ್ಲಿ ಜಪಾನು ಯುದ್ಧ ವನ್ನು ಪ್ರಾರಂಭಿಸಿದ ಕೆಲ ದಿನಗಳಲ್ಲಿಯೇ ಅಂದವಮಾನ ಬ್ರಿಟಿಶರ ಕೈಬಿಟ್ಟು— ಜಪಾನಿಗಳ ವಶಕ್ಕೆ ಹೋಯಿತು. ಮುಂದೆ ನೇತಾಜಿಯುವರು ಸಿಂಗಪೂರಿನಲ್ಲಿ ಅಝಾದ ಹಿಂದ ಸರಕಾರ ಸ್ಥಾಪಿಸಿದ ನಂತರ ಆವರಿಬ್ಬರಲ್ಲಿ ಒಂದು ಒಪ್ಪಂದ ವಾಯಿತು ಆ ಒಪ್ಪಂದದ ಪ್ರಕಾರ— ಜಪಾನು ಅಝಾದ ಹಿಂದ ಸರಕಾರಕ್ಕೆ ಯುದ್ಧಾಸ್ತ್ರಗಳನ್ನು ಒದಗಿಸಬೇಕು. ಆದರ ಬದಲು ಅಝಾದ ಹಿಂದ ಸರಕಾರ ಜಪಾನಕ್ಕೆ ಅಂದವಮಾನ-ನಿಕೋಬಾರ ನಡುಗಡ್ಡೆಗಳನ್ನು ಬಿಟ್ಟುಕೊಡಬೇಕು. ಈ ಕರಾರಿನನ್ವಯ ಜಪಾನು ಆಗಲೇ ಅಂದವಮಾನ ನಡುಗಡ್ಡೆಗಳಲ್ಲಿ ತನ್ನ ಸೈನಿಕ ಠಾಣ್ಯೆಯನ್ನು ತೆರೆದಿತ್ತು. ಅಂದವಮಾನದ ಮುಖ್ಯ ಪಟ್ಟಣವಾದ "ಪೋರ್ಟ ಬ್ಲೇಅರ" ದಲ್ಲಿ ಜಪಾನಿಗಳು ಇಂಗ್ಲೀಷ ಭಾಷೆಯಲ್ಲಿ ಪಾಕ್ಷಿಕ ಪತ್ರಿಕೆ ಯನ್ನು ಹೊರಡಿಸುತ್ತಿದ್ದರು. ಆ ಪತ್ರಿಕೆಯ ಹೆಸರು "ಅಂದವಮಾನ್ ಸಿಂಗ್ಬನ್" ಎಂದಿತ್ತು. ಅನಪೇಕ್ಷಿತವಾಗಿ ಒಂದು ಪ್ರತಿ ನನಗೆ ಮುಂದೆ ಸಿಂಗಪೂರಿನಲ್ಲಿ ನೋಡಲು ಸಿಕ್ಕಿತ್ತು. ಆ ಪತ್ರಿಕೆಯನ್ನು ಒಂದು ಸಲ ಓದಿ ನೋಡಿದೆ— ನನಗೆ ಸಿಕ್ಕ ಆ ಸಂಚಿಕೆಯಲ್ಲಿ ಒಂದು ಭಯಾನಕ ಸುದ್ದಿ ಪ್ರಕಟವಾಗಿತ್ತು.

ಅಂದವಮಾನದಲ್ಲಿದ್ದ ೬ ಜನ ಭಾರತೀಯರು ಬ್ರಿಟಿಶರ ಜತೆಯಲ್ಲಿ ಒಳ ಸಂಚು ನಡೆಸಿ ನಿಪ್ಪೋನ ಸರಕಾರಕ್ಕೆ ವಂಚನೆ ಮಾಡಿದ್ದರಿಂದ ಆವರನ್ನು ಗಲ್ಲಿಗೇರಿಸಿದ ಸುದ್ದಿ ಪ್ರಕಟವಾಗಿತ್ತು.

ಜಪಾನು ಅಂದವಮಾನದಲ್ಲಿ ಪ್ರವೇಶಿಸಿದ ನಂತರ ಅಲ್ಲಿಯ ಎಲ್ಲ ಕೈದಿ ಗಳನ್ನು ಮುಕ್ತ ಮಾಡಿ ಅವರಿಗೆ ಸ್ವಾತಂತ್ರ್ಯವನ್ನು ದಯಪಾಲಿಸಿದರು. ಈ ಉಪಕಾರದ ಪ್ರತಿಯಾಗಿ ಅವರು ಅಡವಿಯನ್ನು ಕಡಿದು ಹೊಲ ಸಾಗುವಳಿ ಮಾಡಿ, ಅದರ ಉತ್ಪನ್ನದಲ್ಲಿಯ ಅರ್ಧದಷ್ಟು ನಿಪ್ಪೋನ ಸರಕಾರಕ್ಕೆ ಕೊಡ ಬೇಕಾಗುತ್ತಿತ್ತಂತೆ. ಒಂದು ಕಾಲಕ್ಕೆ ಅಪರಾಧಿಗಳಿಗೆ ಆಶ್ರಯ ಕೊಟ್ಟು ಹೆಸರು ಕೆಡಿಸಿಕೊಂಡ ಅಂದವಮಾನ್ ಜಪಾನಿಗಳ ಕೈಯಲ್ಲಿ ಆಯಕಟ್ಟಿನ ಸ್ಥಳ ವಾಗಿ ಪರಿಣಮಿಸಿತ್ತು.

ಇವೆಲ್ಲ ವಿಚಾರಗಳು ಅಂದವಮಾನ ನಡುಗಡ್ಡೆಗಳನ್ನು ನೋಡುತ್ತಿದ್ದಾಗ ನನ್ನಲ್ಲಿ ಸುಳಿದು ಹೋದುವು. ಮಧ್ಯಾನ್ಹದ ಸುಮಾರಿಗೆ ಆ ನಡುಗಡ್ಡೆಗಳೂ ಕಾಣದಾದವು. ಮುಂದೆ ತುಸು ದಿನಗಳಲ್ಲಿಯೇ ಸುಮಾತ್ರಾ ದೇಶದ ದಂಡೆ ಕಾಣತೊಡಗಿತು. ಮುಂಜಾನೆ ಸುಮಾರು ೯॥ ಘಂಟೆಗೆ ನಮ್ಮ ಹಡಗ ಸಿಂಗಪೂರ ಕಡಲ ತಡಿಗೆ ಬಂದಿತು. ಸಿಂಗಪೂರ ಬಂದರವನ್ನು ದೂರದಿಂದ ನೋಡಿದಾಗ ನನ್ನಲ್ಲಿ ಒಂದು ಹೊಸ ಉತ್ಸಾಹ ಸಂಚರಿಸಿತು. ಯುದ್ಧ ನಡೆದ ಸಮಯದಲ್ಲಿ ಸಿಂಗಪೂರ ತಲುಪಿದ್ದರೆ ಬೇರೆ ಬಗೆಯ ಭಾವನೆಗಳು ಮನದಲ್ಲಿ ಏಳಬಹುದಾಗಿತ್ತು. ಈಗ ಮಹಾಯುದ್ಧದ ಗೊಂದಲವಿರಲಿಲ್ಲ. ಯುದ್ಧೋತ್ತರ ಪುನರ್‍ರಚನೆಯ ಕಾರ್ಯಕ್ಕಾಗಿ ನಾವು ಹೊರಟಿದ್ದು. ಪೂರ್ವ ಕಡಲುಗಳ ರಾಣಿ ಎಂದು ಹೆಸರು ಪಡೆದ ಪಟ್ಟಣ ಸಿಂಗಪೂರ ನೋಡುವ ಸುಸಂಧಿ ಒದಗಿ ಬಂದುದಕ್ಕಾಗಿ ಆನಂದವಾಗಿತ್ತು. ಒಂದು ವಾರದ ವರೆಗೆ ಹಡಗಿನಲ್ಲಿ ಕುಳಿತು ಬೇಸರವೂ ಆಗಿತ್ತು— ಬೇಗನೇ ನೆಲದ ಮೇಲೆ ಇಳಿಯಬೇಕೆಂದು ಹಾತೊರೆಯುತೊಡಗಿದ್ದೆವು. ಆದರೆ ನಮ್ಮ ದುರ್ದೈವ ಇಲ್ಲಿಯೂ ಕಾದುಕೊಂಡು ಕುಳಿತಿತ್ತು. ನಮ್ಮ ಹಡಗಿನಲ್ಲಿ ಇಬ್ಬರು ಸೈನಿಕರಿಗೆ ಪ್ಲೇಗು ಬಂದಿದ್ದಿತು. ಈ ಪ್ಲೇಗು ಸಾಂಸರ್ಗಿಕ ಬೇನೆಯಾದುದರಿಂದ ಇಡೀ ಹಡಗವನ್ನೇ ಮೂರು ದಿನಗಳ ವರೆಗೆ "ಸಿಗ್ರಿಗೇಟ" ಮಾಡಿ ಇಡಲಾಯಿತು. ನಮಗೆಲ್ಲರಿಗೂ ಅತಿ ನಿರಾಸೆಯಾಯಿತು. ಕಣ್ಣೆದುರಿನಲ್ಲಿ ಸಿಂಗಾಪೂರಿನ ನಯನಮನೋಹರ ಕಟ್ಟಡಗಳು ಕಾಣುತ್ತಿದ್ದುವು. ಆದರೆ ನೆಲದಮೇಲಿಳಿದು ಅವುಗಳ ಹತ್ತಿರ ಹೋಗುವಂತಿರಲಿಲ್ಲ. "ಕನ್ನಡಿಯೊಳಗಿನ ಗಂಟು" ಎಂಬ ನುಡಿಯ ಸರಿಯಾದ ಅರ್ಥ ನನಗಾಗ ಹೊಳೆದಿತು. ಈ ಮೂರು ದಿನಗಳ ವರೆಗೆ ಮನರಂಜನೆಯ ಕಾರ್ಯಕ್ರಮಗಳು ಜರುಗತೊಡಗಿದವು. ಒಂದು ದಿನ ಗುರ್ಖಾ ಸೈನಿಕರ ಕುಕರಿ ನೃತ್ಯವಾಯಿತು. ಒಂದು ದಿನ ಟಗ್ ಆಫ್ ವಾರ್ ರೇಸುಗಳಾದವು. ಹಾಗೂ ಹೀಗೂ ಮಾಡಿ ಮೂರು ದಿನಗಳನ್ನು ಕಳೆದುದಾಯಿತು. ಮೂರನೆಯ ದಿನ ಮಧ್ಯಾಹ್ನ ೮–೩೦ ಡಾಕ್ಟರರು ಸಿಂಗಪೂರಿನಿಂದ ಬಂದು ನಮ್ಮ ಹಡಗವನ್ನೇರಿದರು. ಅವರು ಬಂದು ಎಲ್ಲ ಸೈನಿಕರ ದೇಹಸ್ಥಿತಿಯನ್ನು ತಪಾಸಿಸಿದರು. ಆ ನಂತರ ಸಂಜೆ ನಮ್ಮ ಹಡಗ ಬಂದರದ ಧಕ್ಕೆಗೆ ಬಂದು ನಿಂತಿತು. ನಮಗೆಲ್ಲರಿಗೂ ಕೆಳಗೆ ಇಳಿಯಲು ಅಜ್ಞೆಯನ್ನು ಕೊಡಲಾಯಿತು. ನಾವೆಲ್ಲರೂ ನಮ್ಮ ನಮ್ಮ ಕಿಟ್‌ಬ್ಯಾಗುಗಳನ್ನು ಹೆಗಲಮೇಲಿರಿಸಿಕೊಂಡು ಕೆಳಗಿಳಿದೆವು.

ನೆಲದಮೇಲೆ ಕಾಲುಗಳನ್ನೂರಿದಾಗ ನಮಗಾದ ಆನಂದವನ್ನು ವರ್ಣಿಸಲು ಅಸಾಧ್ಯ. ಕೆಳಗಡೆ ಬ್ಯಾಂಡುವಾದನದೊಂದಿಗೆ ನಮಗೆ ಸ್ವಾಗತವನ್ನು ಕೋರಲಾಯಿತು. ತದನಂತರ ಒಂದೊಂದು ಕಪ್ ಚಹ ಎರಡೆರಡು ಬಿಸ್ಕಿಟುಗಳನ್ನು ಕೊಡಲಾಯಿತು. ಎಲ್ಲ ಸೈನಿಕರೂ ಕೆಳಗೆ ಇಳಿದ ನಂತರ ಊರೊಳಗಿಂದ ಮಾರ್ಚ ಮಾಡುತ್ತ ನಮಗಾಗಿ ಕಾದಿರಿಸಿದ ಸ್ಥಳವಾದ ನಿಸೂನ್ ಟ್ರಾನ್ಸಿಟ್ ಕ್ಯಾಂಪಿಗೆ ಕರೆದೊಯ್ಯಲಾಯಿತು. ಈ ವೇಳೆಗಾಗಲೇ ಸೂರ್ಯ ಮುಳುಗಿ ಕತ್ತಲು ಪಸರಿಸತೊಡಗಿತ್ತು. ನಿಸೂನ ಸಿಂಗಪೂರಿನ ಪೂರ್ವ ದಿಕ್ಕಿಗಿದೆ. ನಿಸೂನ ವಸತಿಯ ವಿಷಯ ಹೇಳುವ ಮೊದಲು, ಸಿಂಗಪೂರ ಮತ್ತು ಮಲಾಯಾದ ಪರಿಚಯ ಮಾಡಿಕೊಡುವದು ಆವಶ್ಯವೆನಿಸುತ್ತದೆ.

## ೧೦

## ಸಿಂಗಪೂರ— ಹಕ್ಕಿನೋಟ

ಮಲಾಯಾ ಮುಖ್ಯ ಭೂಮಿಯಿಂದ ಬೇರ್ಪಟ್ಟು ಸಾಗರದ ಮಧ್ಯ ಒಂದು ನಡುಗಡ್ಡೆ ಇದೆ. ತುಂಬಾ ಆಯಕಟ್ಟಿನ ಸ್ಥಳ. ಪಶ್ಚಿಮದ ಬದಿಗೆ ಹಿಂದೂ ಮಹಾಸಾಗರ. ಪೂರ್ವಕ್ಕೆ ಪ್ಯಾಸಿಫಿಕ್ ಮಹಾಸಾಗರ ಹೀಗೆ ಎರಡು ಮಹಾಸಾಗರಗಳ ನಟ್ಟನಡುವೆ ಮಹಾದ್ವಾರವಾಗಿ ಸಿಂಗಪೂರ ನಿಂತಿದೆ. ಸಿಂಘಪುರವೇ ಸಿಂಗಾಪೂರ "City of lion" ಎಂತಲೇ ಸಿಂಗಪೂರ ಪರಿಚಯ ಪುಸ್ತಕದಲ್ಲಿ ಅರ್ಥ ಕೊಡಲಾಗಿದೆ. ಭಾರತೀಯ ಸಂಸ್ಕೃತಿಯ ಪ್ರಭಾವ ಈ ಬದಿಯಲ್ಲಿ ಎಷ್ಟಿದ್ದಿತು ಎಂಬುದು ಇದೊಂದೇ ಹೆಸರಿನಿಂದ ವ್ಯಕ್ತವಾಗುವಂತಿದೆ. ಸಿಂಗಾಪೂರವನ್ನು ೧೩೭೭ ರಲ್ಲಿ ಜಾವಾದವರು ನಾಶಪಡಿಸಿದರು. ಮುಂದೆ ಸುಮಾರು ೫೦೦ ವರ್ಷಗಳ ವರೆಗೆ ಅದು ಹಾಳು ಸ್ಥಿತಿಯಲ್ಲಿಯೇ ಬಿದ್ದಿತ್ತು. ಮುಂದೆ ೧೮೧೯ ರಲ್ಲಿ ಈಸ್ಟ ಇಂಡಿಯಾ ಕಂಪನಿಯ ಸ್ಟಾಂಫರ್ಡ ರಾಫ್ಲೆ ಎಂಬುವವನು ಸಿಂಗಪೂರನ್ನು ಪುನರುಜ್ಜೀವನಗೊಳಿಸಿದನು. ಅಂದಿನಿಂದ ಸಿಂಗಪೂರ ರಭಸದ ಪ್ರಗತಿಯನ್ನು ಪಡೆದು ಪೂರ್ವದ ಒಂದು ಅತಿ ಮುಖ್ಯ ಬಂದರಗಳಲ್ಲೊಂದಾಗಿ ನಿಂತಿತು.

ಸಿಂಗಪೂರ ಪೂರ್ವಪಶ್ಚಿಮ ಉದ್ದಳತೆ ೨೮ ಮೈಲು ಇದೆ. ಅಗಲಳತೆ (ದಕ್ಷಿಣೋತ್ತರ) ೧೪ ಮೈಲು ಇದೆ. ಇಡೀ ನಡುಗಡ್ಡೆಗೆ ಸಿಂಗಪೂರವೆಂದು ಹೆಸರಿದ್ದರೂ ಊರು ನೆಲಿಸಿದ್ದು ನಡುಗಡ್ಡೆಯ ದಕ್ಷಿಣ ಭಾಗದಲ್ಲಿ ಮಾತ್ರ. ನಿಸರ್ಗವು ಸಿಂಗಪೂರವನ್ನು ಮಲಾಯಾದ ಮುಖ್ಯ ಭೂಮಿಯಿಂದ ಬೇರ್ಪಡಿಸಿದ್ದರೂ ಮಾನವನ ವಿಶ್ವಪ್ರಯತ್ನದಿಂದ ಅದನ್ನು ಮಲಾಯಾಕ್ಕೆ ಜೋಡಿಸಲಾಗಿದೆ. ಉತ್ತರ ದಿಕ್ಕಿನಲ್ಲಿ ಒಂದು ಸೇತುವೆಯಿಂದ ಸಿಂಗಪೂರನ್ನು ಮಲಾಯಾಕ್ಕೆ ಕೂಡಿಸಲಾಗಿದೆ. ಈ ಸೇತುವೆ ಅದ್ಭುತವಾಗಿದೆ. ಈ ಸೇತುವೆ ೫೫೫ ಯಾರ್ಡು ಉದ್ದವಾಗಿದೆ, ೧೭ ಯಾರ್ಡು ಅಗಲವಿದೆ. ಈ ಸೇತುವೆಯ ಮೇಲೆ ಒಂದು ಟಾರ್ ರೋಡವಿದೆ, ೨ ರೈಲ್ವೆ ಲಾಯಿನ, ಒಂದು ನೀರಿನ ಪೈಪುಗಳು ಹಾಯುತ್ತವೆ.

ಕೋಟ್ಯಾವಧಿ ರೂಪಾಯಿಗಳನ್ನು ವೆಚ್ಚ ಮಾಡಿ ಕಟ್ಟಿಸಿದ ಈ ಸೇತುವೆಯನ್ನು ಬ್ರಿಟಿಶರೇ ತಾವು ಸೋಲುವ ಸಮಯ ಬಂದಾಗ ತಮ್ಮ ಕೈಯಿಂದಲೇ ಹಾಳುಗೆಡವಿದರು. ಸಿಂಗಪೂರ ೧೯೪೨ರ ಫೆಬ್ರುವರಿ ೧೫ನೇ ತಾರೀಖಿಗೆ ಜಪಾನಿಗಳ ವಶಕ್ಕೆ ಹೋಯಿತು.

ಒಂದು ವಾರದಲ್ಲಿಯೇ ಜಪಾನಿಗಳು ಸಿಂಗಪೂರವನ್ನು ವಶಪಡಿಸಿಕೊಂಡಿದ್ದರು. ಎಲ್ಲರಿಗೂ ಆಜೇ ಆಶ್ಚರ್ಯ. ಜಪಾನದ ಈ ರಭಸದ ಪ್ರಗತಿ ಯಾರಿಗೂ ಅರ್ಥವಾಗುತ್ತಿದ್ದಿಲ್ಲ.

ಸಿಂಗಪೂರ ಯುದ್ಧದ ಮೊದಲು Free Port ಎಲ್ಲರಿಗೂ ತೆರೆದಿಟ್ಟ ಬಂದರವಿದ್ದಿತು. ಸಿಂಗಪೂರ ಕಸ್ಮೋಪೊಲಿಟೆನ್ ಪಟ್ಟಣ. ಸಿಂಗಪೂರಿನಲ್ಲಿ, ಆಂಗ್ಲರು, ಅರಬರು, ಭಾರತೀಯರು, ಯುರೇಶಿಯನ್‌ರು, ಆಂಗ್ಲೋ ಚಾಯನೀಜರು, ಮಲಾಯಿಗಳು, ಬರ್ಮೀಯರು, ಇಂಡೋನೇಶಿಯನ್‌ರು ಚೀನೀಯರು, ಜಪಾನಿಯರು ವಾಸವಾಗಿದ್ದರು. ನಡುಗಡ್ಡೆಯಲ್ಲಿ ವಾಸವಾಗಿದ್ದ ಜಪಾನೀಯರೆಲ್ಲರೂ ಪಂಚಮದಳಕ್ಕೆ ಸೇರಿದವರೇ ಆಗಿದ್ದರು. ಹೀಗಾಗಿ ಅದರ ಆಯಕಟ್ಟಿನ ಸ್ಥಳದ ಅರಿವು ಜಪಾನಿಗಳಿಗೆ ಮೊದಲೇ ಗೊತ್ತಾಗಿದ್ದುದರ ಮೂಲಕ, ಸುಲಭವಾಗಿ ಇಂಥ ದೊಡ್ಡ ಪಟ್ಟಣವನ್ನು ಸಣ್ಣ ಅವಧಿಯಲ್ಲಿ ಕಬಳಿಸಿಬಿಟ್ಟರು. ಸಿಂಗಪೂರಿನಲ್ಲಿ ಬೀಡುಬಿಟ್ಟಿದ್ದ ಅಸಂಖ್ಯ ಮಿತ್ರ ಸೈನಿಕರು ಪ್ರತೀಕ್ಷಿಸುವ ಪೂರ್ವದಲ್ಲಿಯೇ ಜಪಾನಿ ಕೊಡೆಸೈನಿಕರು ಸಿಂಗಪೂರಿನಲ್ಲಿ ಇಳಿಯತೊಡಗಿದರು. ಸಾಕಷ್ಟು ಸಂಖ್ಯೆಯಲ್ಲಿ ಈ ಕೊಡೆ ಸೈನಿಕರು ಇಳಿದು ಮೊದಲು ಆಯಕಟ್ಟಿನ ಮದ್ದುಗುಂಡುಗಳ ಸಂಗ್ರಹಾಲಯವನ್ನು ಹಾಳುಗೆಡಹಿದರು. ಮುನ್ಸೂಚನೆಯಿಲ್ಲದೇ ಬರುವ ಜ್ವರದಂತೆ ಇತ್ತು ಜಪಾನಿಗಳ ದಾಳಿ. ಮಿತ್ರ ಸೈನಿಕರೆಲ್ಲ ತಡಬಡಿಸಿಕೊಂಡು ಎದ್ದರು. ಅವರಲ್ಲಿ ಪ್ರತೀಕಾರದ ಶಕ್ತಿಯಂತೂ ಉಳಿದಿರಲಿಲ್ಲ. ಏಕೆಂದರೆ ಈ ಯುದ್ಧದಲ್ಲಿ ಕೇವಲ ಮಾನವನ ದೇಹಶಕ್ತಿಯ ಮೇಲೇ ಅವಲಂಬಿಸುವದು ಮೂರ್ಖತನವೇ. ಯಾವನ ಹತ್ತಿರ ಸುಸಜ್ಜಿತ ಶಸ್ತ್ರಾಸ್ತ್ರಗಳಿವೆಯೋ ಆತನೇ ಬಲವಂತ. ಮದ್ದು-ಗುಂಡುಗಳ ಸಂಗ್ರಹಾಲಯ ಧಗಧಗನೆ ಉರಿಯತೊಡಗಿದ್ದುವು. ಮಿತ್ರ ಸೈನಿಕರಲ್ಲಿ ಪ್ರತಿಕಾರ ಶಕ್ತಿ ಸಂಪೂರ್ಣವಾಗಿ ಕಳೆಗುಂದಿ ಹೋಗಿತ್ತು. ಇನ್ನುಳಿದದ್ದು ಪಲಾಯನ ಶಕ್ತಿ. ಎಲ್ಲ ಮಿತ್ರ ಸೈನಿಕರು, ದೊಡ್ಡ ಸೇತುವೆಯ ಮುಖಾಂತರ ಮಲಾಯಾವನ್ನು ಸೇರಿ ತಮ್ಮ ಬೆನ್ನು ಹಿಂದಿನಿಂದ ಜಪಾನೀ ಸೈನಿಕರು ಬರಬಾರದೆಂದು ತಾವು

ಕಟ್ಟಿದ ಮಹಾನ್ ಸೇತುವೆಯನ್ನು ತಮ್ಮ ಕೈಯಿಂದಲೇ ಹಾಳುಗೆಡವಿದರು. ಆದರೆ ಮಿತ್ರ ಸೈನಿಕರ ಈ ಕೃತಿ, ಕೊನೆಗಾಲದ ಲಕ್ಷಣದಂತಿತ್ತು. ಸಂಪೂರ್ಣ ವಿಚಾರ ಮಾಡದೇ ಕೇವಲ ತಾತ್ಪೂರ್ತಿಕ ಸಂರಕ್ಷಣೆಯ ದೃಷ್ಟಿಯಿಂದ ಇಂಥ ದೊಡ್ಡ ಸೇತುವೆಯನ್ನು ಹಾಳುಮಾಡುವದೆಂದರೆ ತಪ್ಪು ಎಂದು ಎಲ್ಲರಿಗೂ ಅನಿಸುತ್ತದೆ. ಆದರೆ ಏನು, ಇಂದಿನ ಯುದ್ಧಗಳಲ್ಲಿಯ ಮುಖ್ಯ ತಂತ್ರ ಗಳಲ್ಲೊಂದು ಇದು. ತಾನು ಓಡಿ ಹೋಗುವಾಗ ಯಾವ ವಸ್ತುಗಳನ್ನೂ ಸರಿಯಾದ ಸ್ಥಿತಿಯಲ್ಲಿ ಬಿಟ್ಟು ಹೋಗಕೂಡದು. ಏಕೆಂದರೆ ಅವು ಶತ್ರುಗಳ ವಶವಾದರೆ— ಅದರಿಂದ ಶತ್ರುಗಳ ಶಕ್ತಿ ದ್ವಿಗುಣಿತವಾಗುತ್ತದೆ.

ಆದರೆ ಇಲ್ಲಿ ಪರಿಸ್ಥಿತಿ ತೀರ ಪ್ರತಿಕೂಲವಾಗಿತ್ತು. ಮಿತ್ರ ಸೈನಿಕರು ಲಗುಬಗೆಯಿಂದ ಸೇತುವೆಯ ಮುಖಾಂತರ ಮಲಾಯಾದಲ್ಲಿ ಸೇರಿ, ಸೇತುವೆ ಯನ್ನು ಹಾಳುಗೆಡವಿ ಜಪಾನಿ ಸೈನಿಕರು ಬೆನ್ನಟ್ಟದಂತೆ ನೋಡಿಕೊಂಡರೇನೋ ನಿಜ. ಆದರೆ ಮಲಾಯಾದಲ್ಲಿ ಅವರ ಹಿಂದೆಯೇ ಆಗಲೇ ಜಪಾನೀ ಕೊಡೆ ಸೈನಿಕರು ಇಳಿಯತೊಡಗಿದ್ದರು. ಮೇಲಾಗಿ ಹಾಳುಬಿದ್ದ ಸೇತುವೆಯನ್ನು ಸಿಂಗಾಪೂರಿನ ಜಪಾನೀ ಸೈನಿಕರು ಕೇವಲ ಮೂರೇ ತಾಸಿನಲ್ಲಿ ತಾತ್ಪೂರ್ತಿಕ ವಾಗಿ ಕಟ್ಟಿ ಅದರ ಆಧಾರದಿಂದ ಮುನ್ನುಗ್ಗಿದರು. ಹೀಗಾಗಿ ಮಿತ್ರ ಸೈನಿಕರು ಅಡಕೊತ್ತಿನಲ್ಲಿ ಸಿಕ್ಕುಬಿದ್ದು ಶರಣಾಗತರಾದರು. ಲಕ್ಷಗಟ್ಟಲೆ ಮಿತ್ರ ಸೈನಿಕರು ಜಪಾನದ ಯುದ್ಧ ಕೈದಿಗಳಾದರು. ಬ್ರಿಟಿಶರು ನೆಚ್ಚಿದ ಎಮ್ಮೆ ಸಿಂಗಪೂರ, ಶೋನಾನಕ್ಕೆ ಜನ್ಮ ಕೊಟ್ಟಿತು. ಸಿಂಗಪೂರ ಶೋನಾನ್ (ಪೂರ್ವ ಕಡಲುಗಳ ರಾಣಿ) ಎಂದು ಹೊಸ ಹೆಸರು ತಳೆದು ಜಪಾನದ ಮುಖ್ಯ ಬಂದರವಾಗಿ ಕಂಗೊಳಿಸತೊಡಗಿತು.

ಜಪಾನೀಯರ ಆಡಳಿತೆಯಲ್ಲಿಯ ಸಿಂಗಪೂರ ಹೇಗಿತ್ತೆಂಬುದು ಆಗ ಅಲ್ಲಿ ವಾಸವಾಗಿದ್ದವರ ಬಾಯಿಯಿಂದಲೇ ಕೇಳುವದು ಒಳಿತು. ಇಂದು ಸಿಂಗಪೂರ ಮತ್ತೆ ಮೊದಲಿನಂತೆ ಫ್ರೀ ಪೋರ್ಟ ಎಂದು ನಿಂತುಕೊಂಡಿದೆ. ಆದರೆ ಹಿಂದಿನ ವೈಭವ ಇಂದಿಲ್ಲ. ಸ್ವತಂತ್ರತೆಯ ಗಾಳಿ ಪೂರ್ವ ದಿಕ್ಕಿನಲ್ಲಿ ಬಲವಾಗಿ ಬೀಸತೊಡಗಿದುದರ ಮೂಲಕ, ಇಲ್ಲಿಯೂ ಜನಜಾಗ್ರತಿಯಾಗಿದೆ. ಆದರೆ ಸಿಂಗಪೂರ ಸ್ವಾತಂತ್ರ್ಯದ ಪ್ರಶ್ನೆ ಅಷ್ಟೊಂದು ಸುಲಭವಾಗಿಲ್ಲ. ಅಲ್ಲಿ ನೆಲೆನಿಂತ ಜನಾಂಗಗಳು ಬೇರೆ ಬೇರೆ ದೇಶದವರು. ಮೂಲ ನಿವಾಸಿಗಳು ಅಲ್ಪಸಂಖ್ಯಾಕ ರಾಗಿದ್ದಾರೆ. ಹೀಗಾಗಿ ಮೂಲನಿವಾಸಿಗಳು ಸ್ವಾತಂತ್ರ್ಯ ದೊರಕಿದರೆ ತಮ್ಮ

ಈಗಿದ್ದ ಹಕ್ಕುಬಾಧ್ಯತೆಗಳಿಗೆ ಎಲ್ಲಿ ಕುಂದು ಬರುವದೋ ಎಂಬ ಅಂಜಿಕೆಯಿಂದ ಸುಮ್ಮನಿದ್ದಾರೆ. ಹೊರದೇಶದಿಂದ ಬಂದು ನೆಲೆಸಿದವರಿಗೆ ಆ ಪ್ರಶ್ನೆ ಇಷ್ಟು ಬೇಗ ಕಾಡುತ್ತಿಲ್ಲವಾದ್ದರಿಂದ ತೆಪ್ಪಗಿದ್ದಾರೆ. ಹೀಗಾಗಿ ಅದು ದೀರ್ಘಾವಧಿಯ ವರೆಗೆ ಬ್ರಿಟಿಶರ 'ಕಾಲೆನಿ' ಯಾಗಿ ನಿಲ್ಲುವ ಸಂಭವವಿದೆ. ೧೯೪೭ ರ ಜನಗಣತಿಯ ಅಂಕೆ-ಸಂಖ್ಯೆಗಳತ್ತ ನೋಡಿದರೆ ಈ ಸಮಸ್ಯೆಯ ಸ್ಥೂಲ ಪರಿಚಯವಾಗಬಹುದು.

## 1947 Census

**ಸಿಂಗಪೂರ ಕಾಲೆನಿ :**

| | | |
|---|---|---|
| ಮಲಾಯುಗಳು | — | ೭೩,೮೦೨ |
| ಚೀನಿಯರು | — | ೭೨೮,೫೨೩ |
| ಭಾರತೀಯರು | — | ೭೧,೩೦೦ |
| ಮಲೇಶಿಯನ್ನರು | — | ೪೨,೭೮೧ |
| ಯುರೋಪಿಯನ್ನರು | — | ೮,೭೯೦ |
| ಯುರೋಶಿಯನ್ನರು | — | ೯,೦೧೨ |
| ಇತರರು | — | ೬,೫೪೮ |
| | ಒಟ್ಟು | ೯೪೦,೭೫೬ |

ಮೇಲಿನ ಅಂಕೆಸಂಖ್ಯೆಗಳತ್ತ ಕೂಲಂಕಷವಾಗಿ ನೋಡಿರಿ. ಮಲಾಯುಗಳು ಅಲ್ಲಿಯ ಮೂಲನಿವಾಸಿಗಳೇನೋ ನಿಜ. ಆದರೆ ಅವರ ಸಂಖ್ಯೆ ನೋಡಿ. ಹೆಚ್ಚುಕಡಿಮೆ ಭಾರತೀಯರೂ ಅದೇ ಸಂಖ್ಯೆಯಲ್ಲಿದ್ದಾರೆ. ಸಿಂಗಪೂರ ಚೀನೀಯರಿಂದಲೇ ತುಂಬಿ ಹೋಗಿದೆ. ಒಂದು ವೇಳೆ ಪ್ರಜಾಪ್ರಭುತ್ವ ರಾಜ್ಯ ಜಾರಿಯಲ್ಲಿ ಬಂದರೆ, ಅದು ಬಹುಸಂಖ್ಯಾಕರಾದ ಚೀನೀಯರ ಕೈಯಲ್ಲಿಯೇ ಹೋಗಬೇಕು. ಏಕೆಂದರೆ ಒಟ್ಟು ಜನಸಂಖ್ಯೆಯ ಮೂರು ನಾಲ್ಕಾಂಶದಷ್ಟು ಚೀನೀಯರೇ ತುಂಬಿದ್ದಾರೆ. ಈ ಹೆದರಿಕೆ ಮಲಾಯುಗಳಲ್ಲಿದ್ದಷ್ಟು ದಿನ ಬ್ರಿಟಿಶರ ಆಳಿಕೆ ಅಲ್ಲಿ ಭದ್ರವಾಗಿ ನಿಲ್ಲುವದರಲ್ಲಿ ಸಂದೇಹವೇ ಇಲ್ಲ.

೧೧

ನಾವು ನಿಸೂನಿನಲ್ಲಿ ಬಂದಿಳಿದ ಕೆಲದಿವಸಗಳಲ್ಲಿ ಅಲ್ಲಿದ್ದ ಅಡವಿಯನ್ನು ಕಡಿಯತೊಡಗಿದೆವು. ನಿಸೂನ ಸಿಂಗಪೂರಿನ ಒಂದು ಭಾಗವಾಗಿದ್ದರೂ ಊರಿಸಿಂದ ೧೦ ಮೈಲು ದೂರವಿದ್ದಿತು. ನಿಸೂನ ಪಟ್ಟಣದ ವಿಸ್ತರಣದ ಭಾಗದಂತಿತ್ತು. ಸಿಂಗಪೂರಿನಿಂದ ನಿಸೂನಿಗೆ ಸಿಟಿಬಸ್ಸುಗಳ ಓಡಾಟ ಪ್ರಾರಂಭವಾಗಿತ್ತು.

## ಡಚ್ ನಿರ್ವಾಸಿತರ ಆಗಮನ

ಮಹಾಯುದ್ಧ ಮುಗಿದ ಕೆಲದಿನಗಳಲ್ಲಿಯೇ ಇಂಡೋನೇಶಿಯಾ (ಜಾವಾ ಸುಮಾತ್ರ)ದಲ್ಲಿ ಸ್ವಾತಂತ್ರ್ಯಯುದ್ಧ ಪ್ರಾರಂಭವಾಯಿತು. ಹಾಲಂಡದ ಹತ್ತಿರ ತರಬೇತುಗೊಳಿಸಿದ ಸೈನಿಕರು ಸಾಕಷ್ಟು ಸಂಖ್ಯೆಯಲ್ಲಿರದ್ದರಿಂದ, ಅದು ತನ್ನ ಮಿತ್ರ ರಾಷ್ಟ್ರವಾದ ಬ್ರಿಟನ್ನನನ್ನು ಸೈನ್ಯ ಸಹಾಯಕ್ಕಾಗಿ ಕೇಳಿಕೊಂಡಿತು. ಅದರ ಪ್ರಾರ್ಥನೆಯ ಮೇರೆಗೆ ಬ್ರಿಟನ್ನೂ ಕೆಲಭಾರತೀಯ ಸೈನಿಕರನ್ನೂ ಕಳಿಸಿತಲ್ಲದೇ ಡಚ್ ನಿರ್ವಾಸಿತರಿಗೆ ನಿಸೂನಿನಲ್ಲಿ ಸ್ಥಳ ಕೊಡಮಾಡಿತು. ಹೀಗಾಗಿ ನಾವು ನಿಸೂನಿಗೆ ಹೋದ ಕೆಲ ದಿನಗಳಲ್ಲಿಯೇ ಡಚ್ ನಿರ್ವಾಸಿತರು ನಮ್ಮ ಬದಿಯಲ್ಲಿಯೇ ಬಂದು ಇರತೊಡಗಿದರು. ಆಗಿನ ಅವರ ಪರಿಸ್ಥಿತಿ ತಾಪದಾಯಕವಿದ್ದಿತು. ಅಂಥ ಪರಿಸ್ಥಿತಿಯಲ್ಲಿದ್ದರೂ ಅವರು ಭಾರತೀಯ ಸೈನಿಕರ ಅನುಕಂಪಕ್ಕೆ ಪಾತ್ರರಾಗಲಿಲ್ಲ. ಅದಕ್ಕೆ ಮುಖ್ಯ ಕಾರಣವೆಂದರೆ, ಪೂರ್ವ ರಾಷ್ಟ್ರಗಳಲ್ಲಿ ಉದಿತವಾದ ಸ್ವಾತಂತ್ರ್ಯ ಜಾಗ್ರತಿ.

## ಕ್ಯಾಥೆ ಬಿಲ್ಡಿಂಗ

ಸಿಂಗಪೂರಿನಲ್ಲಿ ಅತಿ ಎತ್ತರವಾದ ಕಟ್ಟಡವೆಂದರೆ ಕ್ಯಾಥೆ ಬಿಲ್ಡಿಂಗ. ಹದಿನೆಂಟು ಅಂತಸ್ತುಗಳ ಕಟ್ಟಡ. ನಾವು ಹಡಗದಲ್ಲಿದ್ದಾಗಲೇ ನಮಗೆ ಈ ಬಿಲ್ಡಿಂಗು ಕಾಣುತ್ತಿತ್ತು. ಆ ಸಿಂಗಪೂರಿನಲ್ಲಿ ಇಳಿದನಂತರ ಕೆಲದಿನಗಳಲ್ಲಿಯೇ ಈ ಕಟ್ಟಡವನ್ನು ನೋಡಿದೆವು. ಇದೇ ಕಟ್ಟಡದ ಕೆಲ ಭಾಗದಲ್ಲಿ ಅಝಾದ ಹಿಂದ ಸರಕಾರದ ಕಚೇರಿ ಇದ್ದಿತೆಂದು ತಿಳಿದುಬಂದಿತು.

## ಗ್ರೇಟವರ್ಲ್ಡ

ಸಿಂಗಾಪೂರಿನ ನೋಡತಕ್ಕಂಥ ಕೆಲ ಸ್ಥಳಗಳಲ್ಲಿ 'ಗ್ರೇಟವರ್ಲ್ಡ' ಒಂದು ಸ್ಥಳ. ಸಾಯಂಕಾಲ ೪ ಘಂಟೆಯಿಂದ ಪ್ರಾರಂಭವಾಗುತ್ತದೆ ಈ ವರ್ಲ್ಡ. ಒಳಗೆ ಪ್ರವೇಶ ಮಾಡುವದಕ್ಕೆ ಹದಿನೈದು ಸೆಂಟುಗಳು (ಇಂದಿನ ೧೫ ನಯೆ ಪೈಸೆ) ಒಳಗೆ ನಾನಾತರದ ಮನೋರಂಜನ ಕಾರ್ಯಕ್ರಮಗಳು ನಡೆದಿರುತ್ತವೆ. ಅದರಲ್ಲಿ ಮುಖ್ಯವಾದುದೆಂದರೆ ಜೂಜು, ನೃತ್ಯ, ಕೆಲವು ಆಟ ಗಳು. ಹಲವಾರು ಬಗೆಯ ಜೂಜುಗಳ ಆಟ ನಡೆದಿರುತ್ತದೆ. ಒಂದೆರಡು ಕಡೆಗೆ ಮಲಾಯಿ ಹುಡಿಗೆಯರ ನೃತ್ಯಗಳು ನಡೆದಿರುತ್ತವೆ. ಕೇವಲ ನೋಡು ವವರು ಹಾಗೆಯೇ ನೋಡಬಹುದು. ಕೆಲವರಿಗೆ ಆ ಹುಡಿಗೆಯರ ಜತೆಯಲ್ಲಿ ಕುಣಿಯಬೇಕೆನ್ನಿಸಿದರೆ ಕುಣಿಯಬಹುದು. ಅದಕ್ಕೆ ಟಿಕೇಟು ಇಡಲಾಗಿರು ತ್ತದೆ. ಒಂದೆರಡುಕಡೆಗೆ ಚೀನಿ ನಾಟಕಗಳು ನಡೆದಿರುತ್ತವೆ. ಬಾಸ್ಕೇಟ ಬಾಲುಗಳ ಆಟವೂ ನಡೆದಿರುತ್ತದೆ. ಬಾಸ್ಕೇಟ ಬಾಲ ಆಟವನ್ನು ಇಲ್ಲಿ ರಾತ್ರಿ ಯಲ್ಲಿ ಆಡುತ್ತಾರೆ. ಒಂದೆಡೆಯಲ್ಲಿ "ನರಕದ ಗುಹೆ"ಯನ್ನು ಮಾಡಿರುತ್ತಾರೆ. ಒಂದು ಸಣ್ಣ ಬಂಡಿಯಲ್ಲಿ ಕುಳಿತುಕೊಂಡರೆ ಅದು ವಿದ್ಯುಚ್ಛಕ್ತಿಯಿಂದ ಒಳಗೆ ಹೋಗಿ ಕೆಲವಡೆಗಳಲ್ಲಿ ಢಿಕ್ಕಿ ಹೊಡೆಯುತ್ತದೆ. ಹೀಗೆ ಢಿಕ್ಕಿ ಹೊಡೆದಲ್ಲಿ ಇಲೆಕ್ಟ್ರಿಕ್ ಕಿಡಿಗಳು ಹಾರಿ ಮಿಂಚಿನಂತೆ ಬೆಳಕು ಬೀಳುತ್ತದೆ. ಈ ಮಿಂಚು ಬೆಳಕಿನಲ್ಲಿ ಒಂದು ರಾಕ್ಷಸಾಕಾರದ ಮೂರ್ತಿ ನಿಮ್ಮನ್ನು ಹಿಡಿಯಲು ಬಗ್ಗಿ ಬಂದಂತಾಗುತ್ತದೆ. ಅಷ್ಟರಲ್ಲಿ ನೀವು ಕುಳಿತುಕೊಂಡ ಗಾಡಿ ಹಿಂದಕ್ಕೆ ಸರಿದು ಬೇರೆಡೆಗೆ ಧಾವಿಸಿ ಮತ್ತೊಂದುಕಡೆಗೆ ಢಿಕ್ಕಿ ಹೊಡೆಯುತ್ತದೆ. ಅಲ್ಲಿಯೂ ಅದೇ ಅನುಭವ. ಹೀಗೆ ಹದಿನೆಂಟುಕಡೆಗೆ ಢಿಕ್ಕಿ ಹೊಡೆದು, ಹೊರಗೆ ಬಂದು ನಿಲ್ಲುತ್ತದೆ. ಒಳಗಡೆ ತುಂಬಾ ಕತ್ತಲು ಇರುವದರಿಂದ ಒಂದು ಬಗೆಯ ಹೆದರಿಕೆ ಹುಟ್ಟುತ್ತದೆ. ಸಣ್ಣ ಸಣ್ಣ ಮಕ್ಕಳನ್ನು ಒಳಗೆ ಒಬ್ಬೊಬ್ಬರನ್ನು ಬಿಡುವದಿಲ್ಲ. ಅವರ ಜತೆಯಲ್ಲಿ ಹಿರಿಯರಿದ್ದರೆ ಮಾತ್ರ ಗಾಡಿಯಲ್ಲಿ ಕೂಡಿಸಿ ಒಳಗೆ ಬಿಡುತ್ತಾರೆ. ಮತ್ತೊಂದು ಕಡೆಗೆ ಅರ್ಧ ನಗ್ನ ನೃತ್ಯ ನಡೆದಿರುತ್ತದೆ. ಸಣ್ಣದೊಂದು ಥಿಯೇಟರ. ಆ ಥಿಯೇಟರಿನಲ್ಲಿ ಸುಮಾರು ೫೦-೬೦ ಜನ ಹಿಡಿಯಬಹುದು. ಕೇವಲ ಹತ್ತು ನಿಮಿಷಗಳ ಕಾರ್ಯಕ್ರಮ. ಒಳಗೆ ಪ್ರವೇಶ ಪಡೆಯುವದಕ್ಕೆ ಫಿ ೪೦ ಸೆಂಟುಗಳು. ಥಿಯೇಟರ ತುಂಬಿದಾಕ್ಷಣ—

ರಂಗಭೂಮಿಯ ಪಡದೆ ಮೇಲಕ್ಕೆ ಹೋಗುತ್ತದೆ. ಥಿಯೇಟರಿನಲ್ಲಿಯ ದೀಪ ವಾರುತ್ತವೆ. ರಂಗಭೂಮಿಯ ಮುಂದುಗಡೆಯಲ್ಲಿ ತೆಳುವಾದ ಪರದೆ (ಮಚ್ಛರ ದಾಣಿಯ ಅರಬಿಯಂತಹದು) ಇಳಿಬಿಡಲಾಗಿರುತ್ತದೆ. ಒಳಗಡೆ ಫ್ಲಡ್ ಲಾಯಿಟು ಪ್ರಕಾಶಮಾನವಾಗಿರುತ್ತವೆ. ಹಿನ್ನಲೆಯಲ್ಲಿ ಆಕಾಶದ ಪಡದೆ ಇರುತ್ತದೆ. ಒಬ್ಬ ಸುಂದರ ಚೀನಿ ಹುಡಿಗೆ ಮೇಲಿನಿಂದ ರಂಗಭೂಮಿಯಮೇಲೆ ಜಿಗಿಯುತ್ತಾಳೆ. ಅವಳು ಜಿಗಿದಷ್ಟೇ ತಡ ಹಿನ್ನೆಲೆಯಲ್ಲಿದ್ದ ಆಕಾಶದ ಪಡದೆ, ಸರ-ಸರನೇ ಮೇಲೆ ಸುರುಳಿ ಸುತ್ತಿಕೊಳ್ಳುತ್ತ ನಡೆಯುತ್ತದೆ. ಆ ಹುಡಿಗೆ ಅತ್ತಿಂದಿತ್ತ ಇತ್ತಿಂದತ್ತ ಓಡಾಡುತ್ತಾಳೆ. ಹಿಂದೆ ಪರದೆ ವೇಗವಾಗಿ ಸುತ್ತುಕೊಳ್ಳುತ್ತಿರುತ್ತದೆ. ಪ್ರೇಕ್ಷಕರಿಗೆ ಮಾತ್ರ ಅದು ಬೇರೆ ಬಗೆಯಾಗಿ ಕಾಣುತ್ತದೆ. ಸ್ವರ್ಗದಲ್ಲಿಯ ಅಪ್ಸರೆ ಭೂಮಿಗಿಳಿಯುತ್ತಿರುವಂತೆ ಭಾಸವಾಗುತ್ತದೆ. ಒಂದೈದು ನಿಮಿಷದ ವರೆಗೆ ಹೀಗೆ ಹಿನ್ನಲೆಯ ಪಡದೆ ಸುತ್ತಿಕೊಂಡನಂತರ ಅಡವಿಯ ಸೀನು ಇದ್ದ ಪರದೆ ನಿಲ್ಲುತ್ತದೆ. ಆಗ ರಂಗಭೂಮಿಯ ಮೇಲಿದ್ದ ಹುಡಿಗೆ ತನ್ನ ಓಡಾಟ ನಿಲ್ಲಿಸುತ್ತಾಳೆ. ಈಗ ಅವಳು ಭೂತಲವನ್ನು ಮುಟ್ಟಿದಳೆಂದು, ಪ್ರೇಕ್ಷಕರಿಗೆ ಭಾಸವಾಗುತ್ತದೆ. ರಂಗಭೂಮಿಯ ಮೇಲೆ ಸ್ನಾನಗ್ರಹದ ವ್ಯವಸ್ಥೆ ಇದ್ದಂತೆ ತೋರಿಸಲಾಗುತ್ತದೆ. ಆ ಹುಡುಗಿ ಸ್ನಾನ ಮಾಡಬೇಕೆಂದು ತನ್ನ ಮೈಮೇಲಿದ್ದ ವಸ್ತ್ರಗಳನ್ನು ಒಂದೊಂದಾಗಿ ತೆಗೆಯತೊಡಗುತ್ತಾಳೆ. ವಸ್ತ್ರಗಳನ್ನು ಮೆಲ್ಲ ಮೆಲ್ಲನೇ ಸಾಭಿನಯವಾಗಿ ತೆಗೆಯುತ್ತಾಳೆ. ಕೊನೆಯ ಲಂಗ ತೆಗೆದುಕೊಳ್ಳುವಾಗಲೇ ರಂಗಭೂಮಿಯಲ್ಲಿ ಕತ್ತಲಾಗುತ್ತದೆ. ಥಿಯೇಟರಿನ ದೀಪಗಳು ಹತ್ತಿಕೊಳ್ಳುತ್ತವೆ. ಆಯಿತು ಆಟ ಮುಗಿಯಿತು. ಇಡೀ ಆಟ ಹತ್ತು ನಿಮಿಷದಲ್ಲಿ ಮುಗಿದುಹೋಗುತ್ತದೆ. ಮತ್ತೆ ಅದೇ ಆಟ. ದಿನ ನಿತ್ಯ ನೂರಾರು ಪ್ರಯೋಗಗಳು ನಡೆಯುತ್ತವೆ. ಆ ಆಟ ನಡೆಸುವ ಮಾಲೀಕರು, ತಮಗೆ ಬಂದ ಹಣವನ್ನು ಗುದ್ದಲಿ ಸಲಿಕೆಗಳಿಂದಲೇ ಎಳೆದುಕೊಳ್ಳಬೇಕು.

ಇಂಥ ವರ್ಲ್ಡಗಳು ಮಲಾಯದ ದೊಡ್ಡ ದೊಡ್ಡ ಪಟ್ಟಣಗಳಲ್ಲಿಯೂ ಇವೆ. ಸಾಮಾನ್ಯವಾಗಿ ಮಾಲೀಕರೆಲ್ಲರೂ ಚೀನೀಯರೇ ಆಗಿದ್ದಾರೆ.

ಒಂದು ವಾರದಲ್ಲಿ ಸಾಮಾನ್ಯವಾಗಿ ಸಿಂಗಪೂರನ್ನು ಸುತ್ತು ಹಾಕಿದೆವು. ಚೀನಿಯರ ಗುಡಿ, ರಬ್ಬರ ಫ್ಯಾಕ್ಟರಿ, ಬೊಟಾನಿಕಲ ಗಾರ್ಡನ್ ಇತ್ಯಾದಿಗಳನ್ನು ನೋಡಿಬಂದೆವು. ಮುಂದಿನ ವಾರವೇ ನಮ್ಮ ಮೊಬಾಯಿಲ್ ಕಂಪನಿಯು

ಮುಖ್ಯಪಡೆ ಅಲೋರಸ್ಟಾರಕ್ಕೆ ತೆರಳಿತು. ನಾವು ಕೇವಲ ೧೫ ಸೈನಿಕರು ರೇಅರ ಪಾರ್ಟಿಯಲ್ಲಿ ಉಳಿದುಕೊಂಡೆವು. ನಮ್ಮ ಮುಖ್ಯ ಪಾರ್ಟಿಯು ಸಿಂಗಪೂರಿನಿಂದ ಅಲೋರಸ್ಟಾರಕ್ಕೆ ಹೋದಬಳಿಕ ನಾವು ನಿಸೂನ ಕ್ಯಾಂಪಿನಿಂದ— ಊರಲ್ಲಿಯ ರೇಸಕೋರ್ಸ ಕ್ಯಾಂಪಿಗೆ ಬಂದು ಬೀಡು ಬಿಡಬೇಕಾಯಿತು

ರೇಸಕೋರ್ಸ ಕ್ಯಾಂಪ ಬಹಳ ದೊಡ್ಡದಿತ್ತು. ಸಾವಿರಾರು ಜಪಾನೀ ಯುದ್ಧ ಕೈದಿಗಳು ಹಗಲಿರುಳು ಅಲ್ಲಿ ದುಡಿಯುತ್ತಿದ್ದರು. ಸಿಂಗಪೂರ ಮಲಾಯಾ ಸೇತುವೆ ಕಟ್ಟುವ ಕೆಲಸ ರಭಸದಿಂದ ಸಾಗಿತ್ತು.

ಸಿಂಗಪೂರಿನಲ್ಲಿ ಒಂದು ಇಂಡಿಯನ್ ಅಸೋಸಿಎಶನ್ ಇದೆ. ಸಿಂಗಪೂರಿನಲ್ಲಿ ಆಗ ಸಾಕಷ್ಟು ಸಂಖ್ಯೆಯಲ್ಲಿ ಸಿಂಹಳೀಯರೂ ಇದ್ದರು. ಅವರು ಮಾತ್ರ ಈ ಅಸೋಸಿಎಶನ್ನಿನ ಸದಸ್ಯರಾಗುತ್ತಿದ್ದಿಲ್ಲ. ನನಗಾಗ ಅಷ್ಟೊಂದು ಈ ರಾಜಕಾರಣ ತಿಳಿಯುತ್ತಿರಲಿಲ್ಲ, ಸಿಂಹಳೀಯರನ್ನು ಭಾರತೀಯರೇ ಎಂದು ತಿಳಿದುಕೊಂಡಿದ್ದೆನು.

## ಮಲಾಯಾದಲ್ಲಿ ಪ್ರವೇಶ

ಒಂದು ಸಂಜೆ ನಮಗೆ ನಮ್ಮ ವರ್ಕಶಾಪ್ ಕಂಪನಿಗೆ ಹೋಗಿ ಕೂಡಿಕೊಳ್ಳುವ ಆದೇಶ ಬಂದಿತು. ನಾವು ಹದಿನೈದು ಜನ ಸೈನಿಕರೂ ಅಲೋರಸ್ಟಾರಕ್ಕೆ ಹೋಗುವ ಗಾಡಿಯನ್ನು ಹಿಡಿದೆವು. ಆಗ ರೈಲ್ವೆ ಪಾಸನ್ನಾಗಲೀ ಟಿಕೇಟನ್ನಾಗಲಿ ಕೊಳ್ಳುವ ಪರಿಪಾಠವಿರಲಿಲ್ಲ. ಏಕೆಂದರೆ ಯುದ್ಧ ಮುಗಿದಾಕ್ಷಣ ಕೆಲ ದಿನಗಳ ವರೆಗೆ ಸೈನ್ಯಖಾತೆಯ ಆಡಳಿತವಿರುತ್ತದೆ. ಆಗ ಸೈನಿಕರಿಗಾಗಿ ತುಂಬಾ ಸವಲತ್ತುಗಳಿರುತ್ತವೆ. ನಾವು ಸಂಜೆ ೬ ಘಂಟೆಗೆ ಸಿಂಗಪೂರನ್ನು ಬಿಟ್ಟೆವು. ಮಲಾಯಾದಲ್ಲಿದ್ದುದು ಒಂದೇ ರೇಲ್ವೆ. ಅದೇ F. M. S. Railway (Federated Malaya States Railway) ಎಂದು. ಸಿಂಗಪೂರಿನಿಂದ ಒಂದು ಲೈನು ಸೀದಾ ಉತ್ತರಕ್ಕೆ ಅಲೋರಸ್ಟಾರವನ್ನು ಮುಟ್ಟಿ ಮುಂದೆ ಸ್ವತಂತ್ರ ರಾಜ್ಯವಾದ ಸಯಾಮ ದೇಶವನ್ನು ಪ್ರವೇಶಿಸುತ್ತದೆ. ಇನ್ನೊಂದು ಲಾಯಿನ್ ಸಿಂಗಪೂರಿನಿಂದ ಪೂರ್ವ ದಂಡೆಯಮೇಲಿದ್ದ ಕೋಟಾಬಾರ್ಹುವನ್ನು ಮುಟ್ಟಿ ಮುಂದೆ ಸಯಾಮ ದೇಶವನ್ನು ಪ್ರವೇಶಿಸುತ್ತದೆ.

ನಮ್ಮ ಗಾಡಿ ಸಿಂಗಪೂರ ಬಿಟ್ಟಮೇಲೆ, ಜೋಹರಬಾರ್ಹು, ಕ್ಲುಆಂಗ, ಗಮಾಸ, ತಂಪಿನ್, ಸೆರಂಬಾಸ್, ಕೋಲಾಲಂಪೂರ (ಮಲಾಯಾದ ರಾಜಧಾನಿ), ಕೊಲಾಕೊಬಾಬಾರ್ಹು ರೋಡ, ಟಾಂಜೂಂಗ, ಮಾಲಿಮು, ಟಾಪಾರೋಡ, ಇಪ್ರೋ ಕೊಲಾಕಾಂಗ್ಸರ, ಟಾಯಪಿಂಗ ಬುಕಿಟಮರ್ಟಿಜಾವ್ ಮುಂತಾದ ದೊಡ್ಡ ಸ್ಟೇಶನ್ನುಗಲ್ಲಿ ನಿಂತುಕೊಳುತ್ತ ಅಮೋರಸ್ಟಾರವನ್ನು ಮುಟ್ಟಿತು. ರೈಲಿನಲ್ಲಿ ಪ್ರವಾಸ ಮಾಡುವಾಗ ಎರಡೂ ಬದಿಯಲ್ಲಿ ದಟ್ಟ ಕಾನುಗಳನ್ನು ನೋಡಿದಾಗ ಒಂದೆಡೆಯಲ್ಲಿ ಭಯ, ಮತ್ತೊಂಡೆಡೆಯಲ್ಲಿ ಆಶ್ಚರ್ಯ-ಕುತೂಹಲ ಮೂಡುತ್ತಿದ್ದವು. ಮಲಾಯಾದಲ್ಲಿ ನಾವು ಕಂಡು ಅನುಭವಿಸಿದ ಘಟನೆಗಳನ್ನು ಹೇಳುವ ಮೊದಲು ಮಲಾಯಾದ ಪರಿಚಯ ಮಾಡಿಕೊಡುವದು ತೀರ ಆವಶ್ಯವೆನಿಸುತ್ತದೆ.

## ಮಲಾಯಾ— ಪಕ್ಷಿನೋಟ

ಉತ್ತರ ಕನ್ನಡಜಿಲ್ಲೆಯಲ್ಲಿ, ಹೊನ್ನಾವರದಿಂದ ಕಾಸರಕೋಡಕ್ಕೆ ಹೋಗ ಬೇಕಾದರೆ, ಶರಾವತೀ ನದಿಯ ಒಂದು ಮೈಲಗಲದ ಪ್ರವಾಹವನ್ನು ಡೋಣಿ ಯಲ್ಲಿ ಕುಳಿತು ದಾಟಬೇಕಾಗುತ್ತದೆ. ಆಗ ನಡುಹೊಳೆಗೆ ಒಂದು ಪ್ರವಾಹದ ವಿರುದ್ಧ ದಿಸೆಗೆ ನೋಡಿದಾಗ ಕಾಣುವ,— ಆ ದಟ್ಟ ಕಾಡಿನಿಂದ ತುಂಬಿದ— ಉತ್ತುಂಗ ಗಿರಿಶ್ರೇಣಿ, ಮಲಾಯಾ ದೇಶದ ಕೆಲಭಾಗದ ನೆನಪು ಮಾಡಿ ಕೊಡುತ್ತದೆ. ಮಲಾಯಾ ಹಚ್ಚ ಹಸಿರು ಬಣ್ಣದ ನಾಡು. ಕೈಗೆಟಕದ ದಟ್ಟ ಕಾಡುಗಳಿಂದ ತುಂಬಿದ ನಾಡು. ೧೨ ತಿಂಗಳು ಮಳೆ, ೧೨ ತಿಂಗಳು ಬಿಸಿಲು. ಈ ತೆರದ ನಿಸರ್ಗವೇ ಅಲ್ಲಿಯ ದಟ್ಟ ಕಾಡಿಗೆ ಕಾರಣವಾಗಿದೆ. ಮೂರು ಬದಿಗೆ ಕಡಲು; ಎಡಬಲ ಚಿಕ್ಕದೊಡ್ಡ ದ್ವೀಪಗಳು (ಜಾವಾ, ಬಾಲಿ, ಸುಮಾತ್ರಾ, ಸೆಲೆಬಿಸ್, ಬೊರ್ನಿವೊ). ದಕ್ಷಿಣದ ತುತ್ತತುದಿಗೆ 'ಜಗತ್ತಿನ ಲ್ಲಿಯ ಪ್ರಸಿದ್ಧ ಬಂದರ', 'ಪೂರ್ವ ಕಡಲುಗಳ ರಾಣಿ' ಎಂದು ಹೆಸರು ಪಡೆದ ಸಿಂಗಾಪೂರ— ಇವುಗಳಿಂದ ಮಲಾಯಾದ ನಾಡು ವಿರಾಜಮಾನ ವಾಗಿದೆ. ಮಲಾಯಾ ದೇಶದ ಪರಿಚಯುವಾಗಬೇಕಾದರೆ, ಅದರ ದಕ್ಷಿಣದ **ಸಿಂಗಾಪೂರ** ನಗರದಿಂದ ಉತ್ತರದ ತುಟ್ಟತುದಿಯ **ಅಲೋರ್‌ಸ್ಟಾರ್** ನಗರದ ವರೆಗೆ ಪ್ರವಾಸ ಬೆಳಸಬೇಕಾಗುತ್ತದೆ.

ಮಲಾಯಾ, ಸಯಾಮದ ಒಂದು ತುದಿಯಿಂದ, ಹಿಂದೀ ಮಹಾಸಾಗರ ದಲ್ಲಿ ಬಾಲದಂತೆ ಇಳಿಬಿದ್ದಿದೆ. ಹಾಗೆ ಇಳಿಬಿದ್ದು ಕಡಲನ್ನು ಇಬ್ಭಾಗ ಮಾಡಿದೆ. ಸಿಂಗಾಪೂರ, ಆ ಎರಡೂ ಕಡಲುಗಳ ನಡುವಿನ ಬಾಗಿಲಿನಂತೆ ಕಂಗೊಳಿಸುತ್ತದೆ.

ಸುಮಾರು ಐದು ನೂರು ವರ್ಷಗಳ ಕೆಳಗೆ, ಮಲಾಯಾ ಅದೇ ದೇಶದ ಸುಲ್ತಾನರ ಅಧೀನದಲ್ಲಿ ಸ್ವತಂತ್ರವಾಗಿತ್ತು. ಕಡಲುಗಳ್ಳತನದ ಉದ್ಯೋಗ ಮನುಷ್ಯನ ಮಾನವನ್ನು ಹೆಚ್ಚಿಸುತ್ತಿತ್ತು. ಆಗ 'ಇಂಥವನಲ್ಲಿ ೬೦ ದೋಣಿ ಗಳಿವೆ' 'ಇಂಥವನಲ್ಲಿ ೩೦ ಇವೆ'— ಈ ಪ್ರಕಾರವಾಗಿ ಮನುಷ್ಯನ ಶ್ರೀಮಂತಿಕೆಯು, ಆವನ ಹಡಗುಗಳ್ಳತನದ ಮೇಲಿಂದ ಎಣಿಕೆಯಾಗುತ್ತಿತ್ತು. ಆದರ ಜತೆಯಲ್ಲಿ ಸುತ್ತುಮುತ್ತಲಿನ ದ್ವೀಪಗಳ ಕೂಡ ಮೆಣಸು, ಹಣ್ಣುಗಳ ವ್ಯಾಪಾರವೂ ನಡೆಯುತ್ತಿತ್ತು. ಮುಂದೆ ಕೋಲಂಬಸ್ ಹಿಂದುಸ್ಥಾನಕ್ಕೆ

ಹೊಸ ಹಾದಿಯನ್ನು ಹುಡುಕಿದಾಗ, ಕೆಲವು ಜನ ಸಾಹಸಿಗಳಾದ ಪಾಶ್ಚಿಮಾತ್ಯರು (ಪೋರ್ತುಗೀಜರು), ೧೫೧೧ ರಲ್ಲಿ ಮಲಾಯಾ ದೇಶಕ್ಕೆ ಬಂದಿಳಿದರು; ಅವರು ಮೆಲ್ಲನೆ ಒಳಜಗಳಗಳಲ್ಲಿ ಕೈಹಾಕಿ, ಮಲಾಕ್ಕಾ ತಮ್ಮ ಕೈವಶಪಡಿಸಿಕೊಂಡು, ಹೇರಳವಾಗಿ ಧನಸಂಪಾದನೆ ಮಾಡತೊಡಗಿದರು. ಅವರ ಸಂಸ್ಕೃತಿ ಮಲಾಯಾದ ಮೂಲ ಜನಾಂಗದ ಮೇಲೆ ತನ್ನ ಪ್ರಭುತ್ವ ಬೀರತೊಡಗಿತು. ಈಗ ಮಲಾಯಾದಲ್ಲಿ **ಮಕಾಡೊ, ಡಿಸೋಜಾ, ಮೊಂಟೆರಿಯೋ** ಮುಂತಾದ ಮತಾಂತರಿಸಿದ ಜನರ ಹೆಸರು, ಪೋರ್ತುಗೀಜ್ ಸಂಸ್ಕೃತಿಯ ನಿದರ್ಶನವಾಗಿವೆ. ಪೋರ್ತುಗೀಜರ ನಂತರ ಇಲ್ಲಿಗೆ ಬಂದವರು ಡಚ್ಚರು. ಇವರು ೧೬೪೦ ರಲ್ಲಿ ಪೋರ್ತುಗೀಜರಿಂದ ಮಲಾಯಾದ ಕೆಲ ಭಾಗವನ್ನು ತಮ್ಮ ಕೈವಶಕ್ಕೆ ತೆಗೆದುಕೊಂಡರು. ಮುಂದೆ ಯುರೋಪದಲ್ಲಿ ನಡೆದ ನೆಪ್ರೋಲಿಯನ್‌ನ ಯುದ್ಧಗಳ ಪರಿಣಾಮವಾಗಿ, ೧೮೨೪ ರಲ್ಲಿ ಮಲಾಯಾ ಬ್ರಿಟಿಶರ ಆಧೀನಕ್ಕೆ ಬಂದಿತು, ೧೮೭೪ ರಲ್ಲಿಯಂತೂ ಅಲ್ಲಿ ಉಳಿದ ಕೆಲವೇ ಜನ ಡಚ್ಚರೂ ಅಲ್ಲಿಂದ ಕಾಲ್ದೆಗೆದರು. ಮಲಾಯಾ ಇಂದು ಪೂರ್ಣವಾಗಿ ಬ್ರಿಟಿಶರ ವಶದಲ್ಲಿದೆ. ಇದರ ಮೂಲ ಶ್ರೇಯಸ್ಸು "ಫ್ರಾನ್ಸಿಸ್ ಲೈಟ್" ಎಂಬ ವ್ಯಾಪಾರಸ್ಥನದು. ಈ ವ್ಯಾಪಾರಸ್ಥ ಮಲಾಯಾದ "ಕೇಢಾ" ಸಂಸ್ಥಾನದ ಸುಲ್ತಾನನ ಸ್ನೇಹ ಗಳಿಸಿ ಅವನಿಂದ **'ಪೇನಾಂಗ್'** ಬಂದರವನ್ನು ಈಸ್ಟ ಇಂಡಿಯಾ ಕಂಪನಿಗೆ ವ್ಯಾಪಾರಕ್ಕಾಗಿ ಗಳಿಸಿದನು. ಸರಿ, ಅದೇ ಅರಬನ ಡೇರೆಯಲ್ಲಿಯ ಒಂಟೆಯ ಮೊದಲ ಹೆಜ್ಜೆಯಾಯಿತು. ಮುಂದೆ ೧೮೧೯ ರಲ್ಲಿ ಮಲಾಕ್ಕಾ ಸ್ಟ್ರೇಟ್ಸ್‌ನ ಮುಂದೆ ಕಾಡಿನಿಂದ ತುಂಬಿದ ಸಿಂಗಾಪೂರ ದ್ವೀಪವನ್ನು ಸ್ಟ್ಯಾಂಪರ್ಡ್ ರಾಫ್ಲೇಸ್ ದೊರಕಿಸಿದ. ಅಲ್ಲಿ ಕಾಡನ್ನು ಕಡಿದು ನಾಡನ್ನು ನಿಲ್ಲಿಸಿದ. ಮೊದಲಿನ ಈ ಹಾಳು ಕೊಂಪೆ ಸಿಂಗಾಪೂರ, ಇಂದು ಇಷ್ಟೊಂದು ಮಹತ್ತ್ವವನ್ನು ಪಡೆದಿದೆ. ನಗರವನ್ನು ನಿಲ್ಲಿಸಿದ್ದು ಹೊಸದಾದರೂ, ಹೆಸರು ಹಳೆಯದೇ ಆಗಿದೆ. ಇಂಗ್ಲಿಶರು ಕೂಡ "Singapur means a city of lion" (ಸಿಂಗಾಪೂರವೆಂದರೆ ಸಿಂಹಗಳ ಪಟ್ಟಣವೆಂದರ್ಥ) ಎಂದು ಒಪ್ಪಿಕೊಂಡಿದ್ದಾರೆ. ಇದರ ಮೇಲಿಂದ ಭಾರತೀಯ ಸಂಸ್ಕೃತಿಯ ಪ್ರಭಾವ ಅಲ್ಲಿ ಎಷ್ಟು ಇದೆ ಎಂಬುದು ಸ್ಪಷ್ಟವಾಗುವದು.

ಮಲಾಯದಲ್ಲಿ ಒಟ್ಟು ಎಂಟು ಸಂಸ್ಥಾನಗಳಿವೆ. "ಪೆರಾಕ್, ಸೆಲಂಗೋರ್, ನೆಗ್ರಿ ಸೆಂಬಿಲನ್, ಪಹಾಂಗ್, ಕೇಢಾ, ಕೆಲಂಟನ್,

ಟ್ರೆಂಗನ್ನೂ, ಜೋಹರ್" ಎಂದು. ನಾಡು ಅಷ್ಟು ದೊಡ್ಡದಲ್ಲ. ಕ್ಷೇತ್ರ ಸುಮಾರು ೪೯೯೬೬ ಚೌರಸ ಮೈಲು, ಅದರಲ್ಲಿ ಎಂಟು ಸಂಸ್ಥಾನಗಳು. ಅವುಗಳ ಆಕಾರವನ್ನು ಇದರ ಮೇಲಿಂದ ಭಾವಿಸಬಹುದು. ಪ್ರತಿ ಸಂಸ್ಥಾನಕ್ಕೊಬ್ಬ ಸುಲ್ತಾನ. ಎಲ್ಲರೂ ಕೇವಲ ಕೈಗೊಂಬೆಗಳು. ಈ ಎಂಟೂ ಸಂಸ್ಥಾನಗಳನ್ನು ಕೂಡಿಸಿ, "Federated Malaya States" ಎಂದು ಕರೆಯುತ್ತಾರೆ. ಆ ಸಂಸ್ಥಾನದೊಳಗಿನ ಆಂತರಿಕ ವ್ಯವಸ್ಥೆ ಬ್ರಿಟಿಶ್ ಅಡ್ವಾಯಿಜರ್‌ನ ಮುಖಾಂತರವೇ ನಡೆಯುತ್ತದೆ. ಈ ಎಂಟು ಸಂಸ್ಥಾನಗಳ ಹೊರತಾಗಿ "ಮಲಾಕ್ಕ" "ಪೆನಾಂಗ್" ಮತ್ತು ಸಿಂಗಾಪೂರ ಇವೆ. ಇವುಗಳ ವ್ಯವಸ್ಥೆ ಬ್ರಿಟಿಶ್ ಗವ್ಹರ್ನರನಿಗೆ ಸೇರಿದೆ. ಸ್ಥಳೀಯ ಜನರಿಂದ ಕೂಡಿದ ಕೌನ್ಸಿಲಿನ ಸಹಾಯದಿಂದ ಗವ್ಹರ್ನರ್ ರಾಜ್ಯದಾಡಳಿತ ನಿರ್ವಹಿಸುತ್ತಾನೆ.

ಮಲಾಯಾದ ಪೂರ್ವ ಕರಾವಳಿಯಂತೂ ದಟ್ಟ ಘನಘೋರ ಕಾಡುಗಳಿಂದ ತುಂಬಿಹೋಗಿದೆ. ಕಾಡಿನ ಮಧ್ಯದಿಂದ ರಭಸದಿಂದ ಹಾಯ್ದು ಹೋಗುವ ಅಗಲವಾದ, ಭಯಾನಕವಾದ ಹೊಳೆಗಳಿಗೆ ಇಲ್ಲಿ ಕಡಿಮೆ ಇಲ್ಲ. ಆ ಹೊಳೆಗಳನ್ನು ನೋಡುವಾಗ "ಅಯ್ಯೋ ಇದರಿಂದ ಪಾರಾಗಬಹುದೇ ?" ಎಂದೆನಿಸಿಬಿಡುತ್ತದೆ. ಪೂರ್ವಭಾಗದಲ್ಲಿ ಯಾವ ಹೊಳೆಗಳಿಗೂ ಸೇತುವೆಗಳಿಲ್ಲ. ಫೇರಿಯ ಸಹಾಯದಿಂದಲೇ ವಾಹನಗಳನ್ನು ದಾಟಿಸಬೇಕಾಗುತ್ತದೆ. ಹಿಂಸ್ರ ಪಶುಗಳಿಗೇನೂ ಕೊರತೆ ಇಲ್ಲ. ಅವುಗಳ ತವರುಮನೆ ಇದೆಂದರೂ ತಪ್ಪಾಗದು. ಹುಲಿ, ಕಾಡಕೋಣ, ಸಿಂಹ, ಕಾಡಾನೆ, ವಿಶಿಷ್ಟ ಜಾತಿಯ ಮಂಗಗಳು—ಇವೆಲ್ಲ ಉಂಟು. ಈ ತರದ ನಿಸರ್ಗದ ಪರಿಣಾಮವಾಗಿ, ಮಲಾಯಾದ ಪೂರ್ವಭಾಗ, ಹಿಂದುಳಿದ ಸ್ಥಿತಿಯಲ್ಲಿಯೇ ಇದೆ. ಇನ್ನು ಪಶ್ಚಿಮಭಾಗ ಮಾತ್ರ ಸ್ವಲ್ಪ ಹರವಾಗಿದೆ. ಸುಂದರ ನಗರಗಳನ್ನೂ ಸುಧಾರಣೆಯನ್ನೂ ಕಾಣಬೇಕಾದರೆ, ಪಶ್ಚಿಮ ಭಾಗದಲ್ಲಿಯೇ. ಈ ಭಾಗದಲ್ಲಿ ಹೆಚ್ಚಾಗಿ ತವರದ ಖಣಿಗಳುಂಟು. ಮಲಯದ ಮುಖ್ಯ ಬೆಳೆ, ರಬ್ಬರು. ಸುಮಾರು ೩,೩೦೦,೦೦೦, ಎಕರೆಯಷ್ಟು ಭೂಮಿಯಲ್ಲಿ ರಬ್ಬರಿನ ಸಾಗುವಳಿ ನಡೆಯುತ್ತದೆ. ಹಾಗೆಯೆ ತವರ ಕೂಡ. ಮಹಾಯುದ್ಧದ ಪೂರ್ವದಲ್ಲಿ, ಜಗತ್ತಿನಲ್ಲಿ ತವರದ ಉತ್ಪಾದನೆಗಾಗಿ ಮಲಾಯಾಕ್ಕೆ ಮೊದಲ ಸ್ಥಾನವಿತ್ತು. ಹೀಗೆ ದೇಶದ ಬಹುಭಾಗ ಕಾಡು, ರಬ್ಬರುತೋಟ, ತವರದ ಖಣಿಗಳಿಂದ ವ್ಯಾಪಿಸಿಕೊಂಡದ್ದರಿಂದ, ಆಹಾರಧಾನ್ಯ ಬೆಳಸುವುದಕ್ಕಾಗಿ, ಕೇವಲ ಅಲ್ಪ ಸ್ಥಳ ಉಳಿಯಿತು. ಅದಕ್ಕೆ

ಒಕ್ಕಲುತನ ಇಲ್ಲಿ ಹೆಚ್ಚಾಗಿ ನಡೆಯುತ್ತಿಲ್ಲ. ಎಮ್ಮೆ ಆಕಳುಗಳ ಹಿಂಡು ನಮ್ಮಲ್ಲಿಯಂತೆ ಅಲ್ಲಿ ಎಲ್ಲೆಲ್ಲಿಯೂ ಕಾಣಿಸಿಕೊಳ್ಳುವುದಿಲ್ಲ. ಒಮ್ಮೊಮ್ಮೆ ಎಲ್ಲಿಯಾದರೂ ಎಮ್ಮೆ ಆಕಳುಗಳ ಹಿಂಡು ನೋಡಿದರೆ, ತುಂಬಾ ಆನಂದ ವಾಗುತ್ತಿತ್ತು. ಸ್ವಚ್ಛತೆ ನೋಡಬೇಕಿದ್ದರೆ ಮಲಾಯಾಕ್ಕೆ ಹೋಗಬೇಕು. ಜನತೆಯು ದುಡಿತದಿಂದಲ್ಲ, ನಿಸರ್ಗದ ಸಹಾಯದಿಂದಲೇ. ಪ್ರತಿ ಪಟ್ಟಣಗಳು ಒಳ್ಳೆ ಅಚ್ಚುಕಟ್ಟಾಗಿ ಕಟ್ಟಿಸಲ್ಪಟ್ಟಿವೆ. ಅಲ್ಲಿಯ ಡಾಂಬರ್ ರಸ್ತೆಯನ್ನು ಕಸ ಹೊಡೆಯುವುದಕ್ಕೆ ಯಾವ ಸ್ವೀಪರರೂ ಬೇಕಿಲ್ಲ. ಕಾರಣವಿಷ್ಟೇ; ದಿನವೂ ಮಳೆ ಬೀಳುತ್ತದೆ; ಮಳೆ ಬರುವ ಮೊದಲು ಗಾಳಿ ಬೀಸುತ್ತದೆ; ಆ ಗಾಳಿಗೆ ಕಸ-ಕಡ್ಡಿ ತಾನೇ ಗುಡಿಸಿದಂತಾಗುತ್ತದೆ. ಆನಂತರ ಮಳೆ ಬೀಳುತ್ತದೆ. ಆಗ ರಸ್ತೆಯು ಲಕಲಕ ಮಿಂಚುತ್ತದೆ. ಪಟ್ಟಣಗಳ ಸ್ವಚ್ಛತೆ ಹೀಗಾಗಿ ತಾನೇ ತಾನಾಗಿ ಕಾಯಲ್ಪಡುತ್ತದೆ;

ಇಲ್ಲಿ ನೋಡುವಂಥ ಮುಖ್ಯ ಪಟ್ಟಣಗಳೆಂದರೆ, ಜೋಹರ ಬಾಹ್ರು, ಮಲಾಕ್ಕಾ, ಪೋರ್ಟ್ ಡಿಕ್ಸನ್, ಪೋರ್ಟ್ ಸ್ವಿಟನ್ ಹ್ಯಾಮ್, ಕ್ಲಾಂಗ್, ಕೋಲಾಲಂಪೂರ ಇಪೋ, ಟಾಯಪಿಂಗ್, ಪೇನಾಂಗ್, ಆಲೋರ್ ಸ್ಟಾರ್ ಇವು ಪಶ್ಚಿಮ ಭಾಗದಲ್ಲಿ ದಕ್ಷಿಣೋತ್ತರವಾಗಿ ನಿಂತ ನಗರಗಳು. ಹಾಗೆಯೆ ಪೂರ್ವಭಾಗದಲ್ಲಿ, ಕ್ವಂಟನ್, ಪೇಕನ್, ಕೊಲಾಟ್ರೆಂಗನ್ನೂ ಕೋಟಾಬಾರ್ರು ಮೊದಲಾದವುಗಳಿಗೂ ಇವೆ. ನಾಡಿನತುಂಬೆಲ್ಲ ರೈಲುದಾರಿಗಳೇ ಇಲ್ಲ. ದಟ್ಟ ಕಾಡುಗಳ ಮೂಲಕ ಹಾಕುವುದೂ ದುಸ್ತರವೇ ಮಲಾಯಾದ ರಾಜಧಾನಿ ಕೋಲಾಲಂಪೂರ ದೇಶದ ಮಧ್ಯದಲ್ಲಿ–ಕೊಂಚ ಪಶ್ಚಿಮ ಭಾಗದಲ್ಲಿ—ನೆಲಸಿದೆ.

## ಜನರು

ಇಲ್ಲಿ ಮುಖ್ಯವಾಗಿ ಮೂರು ಜಾತಿಯ ಜನಾಂಗಗಳು ವಾಸಿಸುತ್ತಿವೆ. ಮೂರೂ ಜನಾಂಗದ ಸಂಸ್ಕೃತಿ ತೀರ ಭಿನ್ನ. ಮಲಾಯು, (ಮೂಲ ನಿವಾಸಿಗಳು), ಚೀನೀಯರು, ಹಿಂದೀಯರು ಈ ಮೂರೂ ಜನಾಂಗಗಳು ದೇಶದ ಎಲ್ಲ ಭಾಗಗಳಲ್ಲಿ ಇದ್ದಾರೆ. ಆದರೂ, ಕೆಲಂಟನ್, ಟ್ರೆಂಗನ್ನೂ ಸಂಸ್ಥಾನಗಳಲ್ಲಿ ಮಲಾಯುಗಳು ಹೆಚ್ಚಾಗಿದ್ದಾರೆ; ಹಾಗೆಯೆ ಸೆಲಂಗೋರ್ ಸಂಸ್ಥಾನದಲ್ಲಿ ಹಿಂದೀಯರು ತುಂಬಾ ಇದ್ದಾರೆ. ಪೆನಾಂಗ್ ಪಟ್ಟಣವಂತೂ ಚೀನೀಯರದೇ ಎಂದು ಹೇಳಿದರೆ ಅತಿಶಯೋಕ್ತಿಯಾಗಲಾರದು. ಆಯಾ

ಜನಾಂಗಗಳ ರೀತಿ, ನೀತಿ, ನಡಾವಳಿಗಳನ್ನು ಬೇರೆ ಬೇರೆಯಾಗಿಯೇ ಹೇಳಿದರೆ ಒಳಿತು. ಒಟ್ಟು ಜನಸಂಖ್ಯೆ,— ೧೯೪೭ರ ಜನಗಣತಿಯ ಮೇರೆಗೆ— ೪,೮೭೭,೬೭೮.

**೧೯೪೭ರ ಖಾನೇಸುಮಾರಿಯ ವಿವರ:**

| | | |
|---|---|---|
| ಮಲಾಯುಗಳು | — | ೨,೧೩೫,೮೧೧ |
| ಚೀನೀಯರು | — | ೧,೮೮೨,೮೭೪ |
| ಭಾರತೀಯರು | — | ೫೩೪,೧೪೮ |
| ಮಲೇಶಿಯನ್‌ರು | — | ೨೬೭,೦೩೦ |
| ಯುರೋಪಿಯನ್‌ರು | — | ೯,೧೫೫ |
| ಯುರೇಶಿಯನ್ನರು | — | ೯,೯೮೯ |
| ಇತರರು (ಸಕಾಯಿ, ಜಕುನ್ನ ಮತ್ತು ನಿಗ್ರಿಟೋರು) | — | ೩೮,೭೭೧ |
| | ಒಟ್ಟು | ೪,೮೭೭,೬೭೮ |

## ಮಲಾಯು ಜನರು

ಮಲಾಯುಗಳು ಮಂಗೋಲಿಯನ್ ಟೈಪಿನ ಜನರು. ನಿಲುವು ಎತ್ತರವಲ್ಲ, ಕೊಂಚ ಕುಳ್ಳರೆಂದರೂ ತಪ್ಪಾಗದು. ಬಣ್ಣ ಕೊಂಚ ಸಾದುಗಪ್ಪು. ರೂಪ, ಸ್ವಲ್ಪ ಜಪಾನಿಗಳನ್ನೆ ಹೋಲುತ್ತದೆ. ಇವರೆಲ್ಲರೂ ಮಹಮ್ಮದೀಯರು. ಇವರೆಲ್ಲರೂ ಮೊದಲು ಬೌದ್ಧ ಮತಾವಲಂಬಿಗಳಿದ್ದರಂತೆ. ಮುಂದೆ ಅರಬೀ ವ್ಯಾಪಾರಿಗಳು ಸಿಂಗಾಪೂರಕ್ಕೆ ಬಂದಂದಿನಿಂದ, ಇಸ್ಲಾಮ್ ಧರ್ಮ ಇವರಲ್ಲಿ ಹಬ್ಬಿತು. ಆದರೂ ಹಳೆಯ ಸಂಸ್ಕೃತಿಯು ಅಲ್ಲಲ್ಲಿ ಕಾಣಿಸಿಕೊಳ್ಳುತ್ತದೆ; ಹೆಣ್ಣಿಗೆ ಬುರುಖಾ ಹಾಕುವ ಪದ್ಧತಿ ಇಲ್ಲಿ ಇಲ್ಲವೇ ಇಲ್ಲ. ಹೆಣ್ಣಿಗೆ ಬುರಖಾ ಹಾಕುವ ಪದ್ಧತಿ ಬೇರೆ ದೇಶದಲ್ಲಿ ಇದೆ— ಎಂದು ಹೇಳಿದರೆ ಅವರು ನಕ್ಕುಬಿಡುತ್ತಾರೆ. ಮೋಹರಮ್ ಹಬ್ಬದ ಆಚರಣೆಗೆ ಅವರಲ್ಲಿ ಅಷ್ಟೊಂದು ಮಹತ್ವವಿದ್ದುದು ಕಂಡುಬರಲಿಲ್ಲ. ಆದರೆ ರಮಜಾನ್ ತಿಂಗಳ ಉಪವಾಸದ ಪದ್ಧತಿ ಇವರಲ್ಲಿಯೂ ಇದೆ. ಇವರಾಡುವ ಭಾಷೆ "ಮಲಾಯು". ಬಹಳ ಸುಲಭವಾದ ಭಾಷೆ. ಸಾಧಾರಣವಾಗಿ ಮಾತನಾಡಲಿಕ್ಕೆ— ಕ್ರಿಸ್ತ

ಹೋಗಿ ಆ ಜನರಲ್ಲಿ ೫-೬ ವಾರವಿದ್ದರಾಯಿತು— ದಿನದ ಬಳಕೆಯ ಮಾತು ಗಳನ್ನು ಕಲಿಯಬಹುದು. ಇಲ್ಲಿಯೇ ನೋಡಿ ಒಂದು ಉದಾಹರಣೆ: "ಕೋಲಾಲಂಪೂರಕ್ಕೆ ಹೋಗುವ ಹಾದಿ ಎಲ್ಲಿ?" ಎನ್ನುವುದಕ್ಕೆ "ಮನಾ-ಜಲನ ಸಂಪಾಯಿ ಕೋಲಾಲಂಪೂರ" ಎಂದು. ಭಾಷೆಯ ಲಿಪಿ ಮಾತ್ರ ಆರೇಬಿಕ್. ಮಲಾಯುಗಳು ಸ್ವಭಾವತಃ ಉದಾರರು. ಸರಳ ಜೀವಿಗಳು. ಕಪಟವನ್ನರಿಯದ ಜನ. ಪಂಗಡಪ್ರಿಯರಲ್ಲ. ಹಾಗೆಯೆ ಶಾಂತಿಪ್ರಿಯರು. ರಾಜಕಾರಣವಂತೂ ಈ ಜನರಿಗೆ ಒಗ್ಗದ ವಿಷಯ. ಇವರ ಹೋರೆ, ಸಾಮಾನ್ಯವಾಗಿ ಸಾಗುವಳಿ, ರಬ್ಬರು ತೋಟದಲ್ಲಿ ದುಡಿತ, ಮೀನುಗಾರಿಕೆ, ಇವೆಲ್ಲ ಗುಣಗಳ ಜತೆಯಲ್ಲಿ ಒಂದು ಅವಗುಣವೂ ಅವರಲ್ಲಿ ಸೇರಿಕೊಂಡಿದೆ. ಅದೆಂದರೆ ಆಲಸ್ಯತನ, ಮತ್ತು ವಿಲಾಸಪ್ರಿಯತೆ. "ನಾಳೆ ಮಾಡಿದರಾಯಿತು ಬಿಡು" ಎಂಬ ಮಾತು ಅವರಲ್ಲಿ ಸಹಜವಾಗಿ ಕೇಳಿಸುತ್ತದೆ. ಅವರು ಅಷ್ಟೊಂದು ವಿದ್ಯಾಂವಂತರಲ್ಲದಿದ್ದರೂ ಹೆಣ್ಣಿಗೆ ಸಾಕಷ್ಟು ಸ್ವಾತಂತ್ರ್ಯ ಕೊಟ್ಟಿದ್ದಾರೆ. ಹೆಣ್ಣು ಇಲ್ಲಿ ದಾಸಿಯಾಗಿ ಬಾಳಬೇಕಾಗಿಲ್ಲ. ಗಂಡಿನ ಜೊತೆಗಾರ್ತಿಯಾಗಿ ದುಡಿಯುತ್ತಾಳೆ. ಅವರ ಜತೆಯಲ್ಲಿ ಹೊಗೆಸೊಪ್ಪನ್ನು ಸೇದುತ್ತಾಳೆ. ಅವಳ ಉಡುಪು: ಒಂದು ದುಂಡನ್ನ ಬಣ್ಣ ಬಣ್ಣದ ಅರಿವೆಯನ್ನು ಸುತ್ತುತ್ತಾಳೆ. ಎದೆಗೊಂದು ಪೋಲಕಾ, ತಲೆಗೊಂದು ಕರ್ಚೀಪು. ದುಂಡಾಗಿ ಸುತ್ತುವ ಅರಿವೆಗೆ "ಸಾರಂಗ" ಎನ್ನುತ್ತಾರೆ. ಗಂಡಸರ ಉಡುಪೂ ಅಷ್ಟೇ. ಚಣ್ಣ, ಮೇಲೆ skirt ; ಟೊಂಕದಿಂದ ಪಾದದ ವರೆಗೆ ಮತ್ತೆ "ಸಾರಂಗ" ಸುತ್ತುತ್ತಾರೆ. ಪರಕೀಯರ ಜತೆಯಲ್ಲಿ ಮಲಾಯುಗಳು ಮನಬಿಚ್ಚಿ ಇರಲಾರರು. ಸ್ವಲ್ಪ ಗಂಭೀರತೆಯಿಂದಲೇ ವರ್ತಿಸುತ್ತಾರೆ. ಆದರೆ ಯಾವುದೇ ತರದ ತಿರಸ್ಕಾರ ತೋರಿಸುವುದಿಲ್ಲ. ಇವರ ಶಾಂತಗುಣ ಪರೀಕ್ಷಿಸುವುದಕ್ಕೆ, ನೀವು ಊರಲ್ಲಿಯ ಯಾವುದೇ ಪಾರ್ಕಿಗೆ ಹೋಗಬಹುದು; ಅಲ್ಲಿ ತರತರದ ನೃತ್ಯ-ವಿನೋದಗಳು ನಡೆದಿರುತ್ತವೆ. ಗುಂಪುಗೂಡಿದ ಜನವೆಲ್ಲ ನೃತ್ಯ-ವಿನೋದ ನೋಡಿ ಚಪ್ಪಾಳೆ ಇಕ್ಕಿ ದೊಡ್ಡ ಧ್ವನಿಯಿಂದ ನಕ್ಕರೂ, ಇವನು ಮಾತ್ರ ಬಾಯಿಬಿಡುವುದಿಲ್ಲ. ಇವರಲ್ಲಿ ಒಂದು ವಿಚಿತ್ರ ಪದ್ಧತಿಯ ನೃತ್ಯ ಜಾರಿಯಲ್ಲಿದೆ. ಸಾಯಂಕಾಲ ಪಾರ್ಕಿನಲ್ಲಿ (ಪ್ರತಿ ಊರಿಗೊಂದು ಎರಡು— ಹೀಗೆ ಪಾರ್ಕುಗಳು ಇದ್ದೇ ಇವೆ) ಕುಣಿಯುವ ಹೆಣ್ಣುಮಕ್ಕಳು ಇದ್ದೇ ಇರುತ್ತಾರೆ. ಅವರೆಲ್ಲ ಸ್ಟೇಜಿನ ಮೇಲೆ ಸಾಲಾಗಿ ಕುಳಿತುಕೊಂಡಿರುತ್ತಾರೆ. ಅವರ ಜತೆಯಲ್ಲಿ ಕುಣಿಯಬೇಕೆನ್ನುವವ,

ಸ್ಟೇಜನ್ನೇರಿ ತನಗಾವ ಹೆಣ್ಣು ಬೇಕೋ ಆ ಹೆಣ್ಣಿನ ಕೈಯಲ್ಲಿ ಕಾಸುಗಳನ್ನಿಟ್ಟು ಕರೆಯುತ್ತಾನೆ. ಸರಿ, ಅಲ್ಲಿ ಕುಣಿತ ಸುರುವಾಗುತ್ತದೆ. ಅವನೂ ಅವಳೂ ಎದುರುಬದುರು ನಿಲ್ಲುತ್ತಾರೆ. ಮೈ ಕೈ ಎನಸ್ನೂ ಮುಟ್ಟಕೂಡದು. ಢೋಲಕ ಪ್ರಾರಂಭವಾದಕೂಡಲೆ, ವಿಶಿಷ್ಟವಾಗಿ ಹೆಜ್ಜೆಗಳನ್ನು ಹಾಕಿ ಕುಣಿಯುತ್ತಾರೆ. ಅವಳ ಹೆಜ್ಜೆಗೆ ಇವನ ಹೆಜ್ಜೆ ಸರಿಹೋಗಬೇಕಾಗುತ್ತದೆ. ತಪ್ಪಿದಾಗ ಅವನು ಸೋತಂತೆ; ನೃತ್ಯ ಅಲ್ಲಿಗೆ ಮುಗಿಯುತ್ತದೆ.

ಮಲಾಯು ಜನರಲ್ಲಿ ಒಂದು ಕೆಟ್ಟ ಗುಣವಿತ್ತಂತೆ; ಅದಕ್ಕೆ Amuck (ಅಮುಕ್) ಎಂದು ಕರೆಯುತ್ತಾರೆ. ತನಗೆ ಅಪಮಾನವಾದಾಗ ಅವನು ಕೈಯಲ್ಲಿ ಬರ್ಜಿಯನ್ನು ತೆಗೆದುಕೊಂಡು ಬೀದಿಯುದ್ದಕ್ಕೂ ಓಡುತ್ತಾನೆ. ಮತ್ತು ನಡುವೆ ಸಿಕ್ಕಿದವರನ್ನೆಲ್ಲ ಇರಿದು ಕೊಲ್ಲುತ್ತಾನೆ. ಆದರೆ ಈಗಿಗ ಇದು ಕಾಣುವುದೇ ಇಲ್ಲ. ಕಾಯಿದೆಯಿಂದ ಬಂಧಿತವಾಗಿದೆ. ನಾನು ಒಮ್ಮೆ, ನನ್ನೊಬ್ಬ ಮಲಾಯಿ ಮಿತ್ರನ ಜತೆಯಲ್ಲಿ ಇವರ ವಿಷಯಕ್ಕೆ ಮಾತಾಡಿ, "ಇದೇನೋ ಆಶ್ಚರ್ಯವಾಗಿ ಕಾಣಿಸುತ್ತದೆ" ಎಂದಿದ್ದೆ. ಅದಕ್ಕವನು "ನಿಮ್ಮ ದೇಶದಲ್ಲಿ ಗಂಡ ಸತ್ತರೆ, ಹೆಂಡತಿ ಜೀವಂತ ಅವನ ಚಿತೆಯಲ್ಲಿ ಸುಟ್ಟುಕೊಂಡು ಸಾಯುವ ಪದ್ಧತಿ ಇತ್ತಲ್ಲಾ, ಅದು ಆಶ್ಚರ್ಯದ ಮಾತೇ ಅಲ್ಲವೇ ?" ಎಂದು ನನ್ನ ಮಾತನ್ನು ಅಲ್ಲಿಗೇ ನಿಲ್ಲಿಸಿದ್ದ.

ಇವರು ಊಟ ಮಾಡುವುದು ಕೂಡ ಕೈಗಳಿಂದಲೇ. ನಗ್ನಸ್ನಾನ ಅಶ್ಲೀಲವೆಂದೆಣಿಸುತ್ತಾರೆ. ಇವರ ಬಗ್ಗೆ ಇನ್ನೊಂದು ಮುಖ್ಯ ಮಾತೆಂದರೆ: ಇವರನ್ನು ನೀವು ಅಭಿನಂದಿಸುವಾಗ, ಕೈ ಅಥವಾ ಹೆಗಲನ್ನು ಮುಟ್ಟಿದರೆ ಇವರಿಗೆ ಸೇರದು. ತಲೆಯನ್ನು ಮುಟ್ಟಿದರಂತೂ ದೊಡ್ಡ ತಪ್ಪು. ಪಾಶ್ಚಾತ್ಯ ಸಂಸ್ಕೃತಿ, ಇವರಲ್ಲಿ ಸುಧಾರಣೆಯ ಯಾವ ಬದಲಾವಣೆಯನ್ನೂ ಮಾಡಿಲ್ಲ.

## ಚೀನೀಯರು

ಇವರದು ಮಲಯರಿಗೆ ತೀರ ವಿರುದ್ಧ ಸ್ವಭಾವ. ಪರಕೀಯನ ಜತೆಯಲ್ಲಿ ತುಂಬ ಸಂಬಂಧವಿದ್ದವರಹಾಗೆ ಹರಟೆಮಾಡುತ್ತಾರೆ, ನಗೆಯಾಡುತ್ತಾರೆ. ಇವರಲ್ಲಿಯ ಪಂಗಡಪ್ರಿಯತೆಯನ್ನು ನೋಡಿ ಬೆರಗುಗೊಳ್ಳದೆ ಇರಲಾರೆವು. ಇವನು ನಮ್ಮ ಪ್ರಾಂತದಿಂದ ಬಂದ ಮನುಷ್ಯ— ಎಂದು ಅವನಿಗೆ ಬೇಕಾದ

ಸಹಾಯ ಮಾಡುತ್ತಾರೆ. ಇವರಲ್ಲಿ ಬಹುತರವಾಗಿ, ಚೀನದೇಶದ ದಕ್ಷಿಣ ಕರಾವಳಿಯಿಂದ ಬಂದ ಜನರೇ ಬಹಳ. ಅವರಲ್ಲಿ Hokkiens (ಹಾಕಿನ್ಸ್) Cantonese (ಕ್ಯಾಂಟೋನೀಜ್), Teh-chews (ಟಿಚ್ಯೂಜ್), Khehs (ಖೇಜ), Hailamas (ಹಾಯಲಾಮಾಜ್) ಹೀಗೆ ಬೇರೆ ಬೇರೆ ಪಂಗಡಗಳಿವೆ. ಅವರವರ ಭಾಷೆಯೇ ಬೇರೆ, ಒಂದು ಸಲ ಕೋಲಾಲಂಪೂರದಲ್ಲಿ ನಾನು ಚೀನೀ ನಾಟಕ ನೋಡಲು ಹೋದಾಗ, ಅಲ್ಲಿ ನಟಿಯ ಒಂದು ಮಾತಿಗೆ ಥಿಯೇಟರಿನ ಜನವೆಲ್ಲ ನಕ್ಕಿತು. ನನ್ನ ಬದಿಯವನನ್ನು ಇಂಗ್ಲಿಷಿನಲ್ಲಿ ಆ ಮಾತಿನ ಅರ್ಥವೇನೆಂದು ವಿಚಾರಿಸಿದೆ. ಅವನು ಅದು ತಮ್ಮ ಭಾಷೆಯಲ್ಲವೆಂದೂ ತನಗೆ ಅಷ್ಟು ಸರಿಯಾಗಿ ತಿಳಿಯದು ಎಂದು ಉತ್ತರಿಸಿದ. ಆದರೆ ಎಲ್ಲ ಚೀನೀಯರು ಮಲಾಯು ಭಾಷೆಯನ್ನಾಡುತ್ತಾರೆ. ಇತ್ತಿತ್ತಲಾಗಿ ಚೀನೀಯರ ಸಂಖ್ಯೆ ಮೂಲನಿವಾಸಿಗಳಷ್ಟೇ ಬೆಳೆಯುತ್ತ ನಡೆದಿದೆ. ಇವರಲ್ಲಿಯೂ ಮೂರೂ ಧರ್ಮದ ಜನರಿದ್ದಾರೆ— ಬೌದ್ಧರು, ಕನ್‌ಫ್ಯೂಶಿಯಸ್, ಮತ್ತು ತಾವೂಇಸ್ಟ. ಇವರಲ್ಲಿಯ ಒಂದು ವೈಚಿತ್ರ್ಯ ಹೇಳಲೇಬೇಕಾಗುತ್ತದೆ. ಈ ಮೂರೂ ಧರ್ಮಗಳು ತೀರ ಬೇರೆಯಾಗಿದ್ದರೂ **ಹಿರಿಯರನ್ನು** ಪೂಜಿಸುವ ಪರಿಪಾಠವನ್ನು ಎಲ್ಲರೂ ನಡೆಸುತ್ತಾರೆ. ಇವರಲ್ಲಿ ಲಗ್ನದ ಮೆರೆವಣಿಗೆ ಮತ್ತು ಸ್ಮಶಾನದ ಮೆರೆವಣಿಗೆ ನೋಡುವಹಾಗಿರುವವು. ಲಗ್ನದ ಮೆರೆವಣಿಗೆಯಲ್ಲಿ ಪಲ್ಲಕ್ಕಿಯಲ್ಲಿ ವಧುವನ್ನು ಕೂಡಿಸಿ, ಪರದೆ ಕಟ್ಟಿ, ವರನ ಮನೆಗೆ ಮೆರೆವಣಿಗೆಯಿಂದ ತರುತ್ತಾರೆ. ಮನೆಗೆ ಬಂದ ನಂತರ, ವರ ತನ್ನ ಕೈಯಿಂದ ಪರದೆಯನ್ನು ಸರಿಸಿ, ವಧುವನ್ನು ಕೆಳಗಿಳಿಸುತ್ತಾನೆ. ನಮ್ಮಲ್ಲಿಯಂತೆ ಹುಟ್ಟಿದ ಹಬ್ಬ, ಶ್ರಾದ್ಧಗಳೂ ಜಾರಿಯಲ್ಲಿವೆ. ಆದರೆ ಅವರವರ ಪ್ರತ್ಯೇಕ ಹುಟ್ಟಿದ ಹಬ್ಬಗಳನ್ನು ಮಾಡುವುದಿಲ್ಲ. ವರ್ಷದಲ್ಲೊಂದು ದಿನ ನೇಮಕವಾಗಿರುತ್ತದೆ; ಅಂದೇ ಎಲ್ಲರೂ ತಮ್ಮ ಹುಟ್ಟು ದಿನವನ್ನಾಚರಿಸುತ್ತಾರೆ. ಶ್ರಾದ್ಧವೂ ಹಾಗೇ. ರುಚಿರುಚಿಯಾದ ತಿಂಡಿತಿನಿಸುಗಳನ್ನು ಮಾಡಿ, ಸ್ಮಶಾನಕ್ಕೆ ಎಲ್ಲರೂ ಹೋಗಿ, ಸತ್ತವರಿಗೆ ಅರ್ಪಣ ಮಾಡಿ, ತಾವೇ ಅದೆಲ್ಲವನ್ನೂ ತಿಂದು ಬರುತ್ತಾರೆ. ಪೆನಾಂಗದಲ್ಲಿ ದೊಡ್ಡದೊಂದು "ಸ್ನೇಕ್ ಟೆಂಪಲ್" ಹಾವಿನ ಗುಡಿ ಇದೆ. ಚೀನಿಯರು ಈ ಹಾವನ್ನು (ಮೂರ್ತಿ) ಪೂಜಿಸುತ್ತಾರೆ. ಹಾವೆಂದರೆ ವಿಚಿತ್ರ ಮೂರ್ತಿ. ಹಾವಿಗೆ ಎರಡುರೆಕ್ಕೆಗಳೂ ಇವೆ. ನಮ್ಮ ಜನರಂತೆ ಇವರೂ ಭೂತ ಪ್ರೇತಗಳಲ್ಲಿ ತುಂಬಾ ನಂಬಿಗೆ ಇಡುತ್ತಾರೆ. ಇವರಲ್ಲಿ ಹೆಚ್ಚು ಮಕ್ಕಳಿದ್ದ

ವನೇ ಮಾನವಂತ. 'ಮಕ್ಕಳಿಲ್ಲದವರಿಗೆ ಮೋಕ್ಷವಿಲ್ಲ' ಎಂಬ ಮಾತನ್ನಂತೂ ಇವರು ನಮ್ಮವರಿಗಿಂತ ಹೆಚ್ಚು ನಂಬುತ್ತಾರೆ. ಹೆಣ್ಣುಮಕ್ಕಳಿಗೆ ಮಿತಿಮೀರಿದ ಸ್ವಾತಂತ್ರ್ಯ ಕೊಟ್ಟಹಾಗಿದೆ. ಇವರ ಉಡಿಗೆ ತೊಡಿಗೆ ಸಾದಾ ತರಹದ್ದೆ. ಹೆಂಗಸರು ಒಂದು ಚಣ್ಣ ಮೇಲೆ ಹಾಫ್‌ಶರ್ಟ್ (ಆದರ ಆಕಾರ ಜೇರಿತರದ್ದು ಇರುತ್ತದೆ).

ಮಲಾಯಾದಲ್ಲಿ ಇವರ ಮುಖ್ಯ ಉದ್ಯೋಗವೆಂದರೆ ತವರದ ಕಾರಖಾನೆಗಳನ್ನು ನಡೆಸುವುದು. ವ್ಯಾಪಾರ, ದಂತವೈದ್ಯ, ರಬ್ಬರುಕೆಲಸ— ಇವೇ ಮುಂತಾದುವು. ಯಾರೂ ಸರಕಾರಿ ನೌಕರಿಗಳಿಗೆ ಹಾತೊರೆಯುವುದೇ ಇಲ್ಲ. ಇವರು ತುಂಬ ಶ್ರಮಜೀವಿಗಳು. ಪಾಶ್ಚಾತ್ಯ ಸಂಸ್ಕೃತಿಯ ಪ್ರಭಾವ ಇವರ ಮೇಲೆ ತುಂಬಾ ಬೀಳಹತ್ತಿದೆ.

ಮಲಯಾದಲ್ಲಿಯ ಚೀನೀಯರಲ್ಲಿ ಅರ್ಧಕ್ಕಿಂತ ಹೆಚ್ಚು ಜನ ಕಮ್ಯುನಿಜಂ ತತ್ತ್ವಕ್ಕೆ ಒಳಗಾದವರೆಂದು ಕಾಣುತ್ತದೆ. ಒಂದು ಸಲ ಸುಮಾರು ೯೯ ಳ೭ರಲ್ಲಿ, ಇಪ್ರೋದ ಹತ್ತಿರ ಚಿಯಾಂಗ್ ಕೈಶೇಕರ ಭಾವಚಿತ್ರದ ಮೆರವಣಿಗೆ ಹೊರಟಾಗ, ಈ ಎರಡೂ ಬಣಗಳಲ್ಲಿ ತುಂಬ ಕೈ ಕೈ ಹತ್ತಿತ್ತು. ಇಂಡಿಯನ್ ಬಟಾಲಿಯನ್ ಹೋಗಿ, ಆ ಗದ್ದಲವನ್ನು ಶಾಂತಪಡಿಸಿತು.

ಈ ಚೀನೀಯರಲ್ಲಿಯ ವಿಚಿತ್ರ ಸ್ವಭಾವವೆಂದರೆ, ಮೈ ಮೈಗೆ ಮುಟ್ಟಿಸುವದೂ, ಬೆನ್ನಮೇಲೆ ಹೊಡೆಯುವುದೂ ಅದೂ ಅಲ್ಲದೆ ಕೈ ಕುಲುಕಾಟವು ಅವರಿಗೆ ಸೇರದು. ಇವರು ತಯಾರಿಸಿದ ಚಹದ ರುಚಿ ಮಾತ್ರ ಕೊಂಚ ಮಾದಕವಾಗಿರುತ್ತಿತ್ತು.

ಇನ್ನುಳಿದವರೆಂದರೆ ಭಾರತೀಯರು. ಅವರಲ್ಲಿ ಹೆಚ್ಚಾಗಿ ತಮಿಳರು, ರಬ್ಬರುತೋಟಗಳಲ್ಲಿ ಕೂಲಿಯವರಾಗಿಯೂ ಸರಕಾರೀ ಕಚೇರಿಗಳಲ್ಲಿ ಕಾರಕೂನರಾಗಿಯೂ ದುಡಿಯುತ್ತಾರೆ. ಪಂಜಾಬದಿಂದ ಬಂದ ಸೀಖರೂ ಸುಮಾರಾಗಿ ಇದ್ದಾರೆ. ಸ್ಥಳೀಯ ಪೋಲೀಸ ಪಡೆಗಳಲ್ಲಿ ಹೆಚ್ಚಾಗಿ ಸೀಖರೇ ತುಂಬಿದ್ದಾರೆ. ಪಠಾಣರೂ ಇದ್ದಾರೆ. ಯಥಾಪ್ರಕಾರವಾಗಿ ಜನರಿಗೆ ಸಾಲ ಕೊಡುವ ಉದ್ಯೋಗವನ್ನು ಅಲ್ಲಿಯೂ ಅವರು ನಡಿಸಿಯೇ ಇದ್ದಾರೆ. ಅಲ್ಪಸ್ವಲ್ಪ ಮಲಯಾಳಿಗಳೂ ವ್ಯಾಪಾರಿಗಳಾಗಿ ನೆಲೆಸಿದ್ದಾರೆ. ಮಲಾಯಾದ ದೊಡ್ಡ ದೊಡ್ಡ ಊರುಗಳಲ್ಲಿ ದೋಸೆ–ಇಡ್ಲಿ–ಸಾಂಬಾರ ಕೊಡುವ "ಅಯ್ಯರ್ಸ್ ಹೊಟೇಲು" ಗಳೂ ಇವೆ. ಕೋಲಾಲಂಪೂರದಲ್ಲಿ ಬಾಥೂ ರೋಡಿನಲ್ಲಿ,

ಒಂದು ಅಯ್ಯರ್ಸ್ ಹೋಟಲಿದೆ. ನಾವು ಯಾವಾಗಲೂ ಅಲ್ಲಿಯೇ ವಿಶ್ರಾಂತಿ ತೆಗೆದುಕೊಳ್ಳುತ್ತಿದ್ದೆವು.

ಇವರ ಹೊರತಾಗಿ, ಯುರೋಪಿಯನರೂ ಅರಬರೂ ಇದ್ದಾರೆ. ಅರಬರು ಕೇವಲ ಸಿಂಗಾಪೂರದಲ್ಲಿ ಮಾತ್ರ ಇದ್ದಾರೆ. ಈ ಎಲ್ಲ ಜನರನ್ನು ಬಿಟ್ಟರೆ, ಇನ್ನೊಂದು ಕಾಡು ಜನಾಂಗವಿದೆ. ಅದು ಒಟ್ಟು ಜನಸಂಖ್ಯೆಯಲ್ಲಿ ೧೦೦ಕ್ಕೆ ೧ ರಷ್ಟು ಇದೆ. ಅವರಿಗೆ ಸಕಾಯುಗಳೆಂದು ಕರೆಯುತ್ತಾರೆ. ಇವರು ಕೇವಲ ಕಾಡಿನಲ್ಲಿಯೇ ಇರುತ್ತಾರೆ. ಎತ್ತರವಾದ ಗಿಡಗಳ ಮೇಲೆ ಮನೆಗಳನ್ನು ಕಟ್ಟುತ್ತಾರೆ, ಊದಂಬುಗಳಿಂದ (Blow pipe) ಪಶುಗಳನ್ನು ಕೊಂದ. ಜೀವಿಸುತ್ತಾರೆ. ಮರಗಳನ್ನೇರುವುದರಲ್ಲಿ ಇವರಷ್ಟು ನಿಷ್ಣಾತರು ಯಾರೂ ಇರಲಿಕ್ಕಿಲ್ಲ. ಇತ್ತಿತ್ತಲಾಗಿ ಇವರನ್ನು ಹಿಡಿದು ತಂದು ನವನಾಗರಿಕರನ್ನಾಗಿ ಮಾಡುವ ಕಾರ್ಯವನ್ನು ಮಿಶನರಿಗಳು ಕೈಕೊಂಡಿದ್ದಾರೆ. ಎಷ್ಟೋ ಜನರು ಸುಧಾರಿಸಹತ್ತಿದ್ದಾರೆ.

ಇಂದಿನ ಮಲಾಯಾದ ಸ್ಥಿತಿ ತುಂಬಾ ಬೇರೆಯಾಗಿದೆ. ತಮ್ಮ ನೆರೆ-ನಾಡಾದ ಇಂಡೋನೇಶಿಯಾ ಡಚ್‌ರೊಂದಿಗೆ ಕಾದಾಡಿ ಸ್ವತಂತ್ರರಾದರು. ಜಾವಾ, ಸುಮಾತ್ರ, ಮತ್ತು ಮಲಾಯಾ ಈ ಮೂರೂ ದೇಶಗಳ ಭಾಷೆ ಒಂದೇ— ಅದೇ ಮಲಾಯು. ಮಲಾಯಾಗಳು ಇಂದು ಮಲಾಯಾದ ಮೂಲನಿವಾಸಿಗಳಾಗಿದ್ದಾರೆ. ಆದರೆ ಇತಿಹಾಸದ ತೀರ ಮೊದಲ ಪುಟಗಳನ್ನು ತೆರೆದಾಗ ಅವರೂ ಕೂಡ ಸುಮಾತ್ರಾದಿಂದ ಮಲಾಯಾಕ್ಕೆ ವಲಸೆಯಾಗಿ ಬಂದು ನಿಂತರೆಂಬ ಸಂಗತಿ ತಿಳಿಯುತ್ತದೆ. ಆದರೆ ಇದೊಂದೇ ಸಂಗತಿಯಿಂದ ಅವರನ್ನೂ ಮಲಾಯದ ಇನ್ನಿತರ ವಲಸೆಗಾರರ ಸಾಲಿನಲ್ಲಿ ನಿಲ್ಲಿಸುವದು ಸಮಂಜಸವೆನಿಸಲಾರದು. ಭಾರತದಲ್ಲಿಯೂ ಆರ್ಯರೂ ಹೊರಗಿನಿಂದ ಬಂದವರಿದ್ದಂತೆ ಈ ಮಲಾಯುಗಳು ಮಲಾಯಾಕ್ಕೆ ಸುಮಾತ್ರದಿಂದ ಬಂದವರಿರುತ್ತಾರೆ. ಹೀಗಿದ್ದೂ ಮಲಾಯಾದ ಕೆಲ ಕಾಡು ಜನಾಂಗ "ಸಕಾಯು" ಗಳ ಮುಖಂಡನೊಬ್ಬ ಮಲಾಯಾದ ಮೂಲನಿವಾಸಿಗಳು ಮತ್ತಾರೂ ಆಗಿರದೇ ಸಕಾಯುಗಳೇ ಎಂದು ವಾದಿಸುತ್ತಿದ್ದಾನೆ. ಒಂದೆಡೆಯಲ್ಲಿ ಮಲಾಯುಗಳ ಆಲಸ್ಯ, ಮತ್ತೊಂದೆಡೆಯಲ್ಲಿ ಚೀನೀ ಕಮ್ಯುನಿಸ್ಟರ ಗುಪ್ತ ಚಟುವಟಿಕೆ, ಬಹು ಸಂಖ್ಯೆಯಲ್ಲಿ ಇರುವ ಇನ್ನಿತರ ವಲಸೆಗಾರರು, ಇದರಿಂದಾಗಿ ಮಲಾಯಾದ ರಾಜಕೀಯ ವಾತಾವರಣ ತುಂಬಾ ಬಿಕ್ಕಟ್ಟಿನದಾಗಿದೆ.

ಮಲಾಯಾಕ್ಕೆ ಸೊನ್ನೆ ಸೊನ್ನೆಯೇ ಬ್ರಿಟಿಶರು ಸ್ವಾತಂತ್ರ್ಯವನ್ನು ದಯ ಪಾಲಿಸಿದರು. ಮಲಾಯಾದ ಸ್ವಾತಂತ್ರ್ಯ ಮಲಾಯಿಗಳ ಕೈಯಲ್ಲಿಯೇ ಸಿಗುವಹಾಗೆ ವ್ಯವಸ್ಥೆಯನ್ನು ಮಾಡಿದ್ದಾರೆ. ಮಲಾಯಾ ದೇಶದ ಧರ್ಮ (State Religion) 'ಇಸ್ಲಾಂ'ವೆಂದು ಘಟನೆಯಲ್ಲಿ ನಿರ್ಣಯಿಸ ಲಾಗಿದೆ.

ಯುದ್ಧೋತ್ತರ ಸಮಯದಲ್ಲಿ ಮಲಾಯಾದಲ್ಲಿ ಕಮ್ಯುನಿಸ್ಟರ ಭೂಗತ ಚಳುವಳಿ ಪ್ರಭಲಗೊಂಡಿತು. ಅವುಗಳನ್ನು ಹತ್ತಿಕ್ಕುವ ಕೆಲಸ ಬ್ರಿಟಿಶರ ಕೈಯಿಂದ ಆಗದೇ ಹೋಯಿತು. ಮಲಾಯಾದಲ್ಲಿ ಒಟ್ಟು ಕ್ಷೇತ್ರದ ⅘ ಅಂಶ ದಷ್ಟು ಕಾಡು ಅಡವಿಯೇ ತುಂಬಿದೆ. ಈ ಕೈ ಮುಟ್ಟದ ದಟ್ಟ ಕಾಡುಗಳು ಕಮ್ಯುನಿಸ್ಟರಿಗೆ ಆಶ್ರಯವನ್ನು ಕೊಟ್ಟವು.

ಯುದ್ಧದ ಸಮಯದಲ್ಲಿ ಈ ಕಮ್ಯುನಿಸ್ಟರು "AJA" (ಅಜಾ ಅಂಟಿ ಜಾಪನೀಜ ಅಸೋಶಿಯೇಶನ್) ಎಂಬ ಸಂಸ್ಥೆಯನ್ನು ಕಟ್ಟಿಕೊಂಡು, ಬ್ರಿಟಿಶ ರಿಗೆ ಸಂಪೂರ್ಣ ಬೆಂಬಲನೀಡಿ, ಗೆರಿಲ್ಲಾ ಚಟುವಟಿಕೆಗಳನ್ನು ನಡೆಸಿ ಜಪಾನೀ ಸೈನಿಕರಿಗೆ ತುಂಬಾ ತೊಂದರೆಯನ್ನು ಕೊಟ್ಟು ಬ್ರಿಟಿಶರ ಗೆಲುವಿಗೆ ಸ್ವಲ್ಪಮಟ್ಟಿಗೆ ಕಾರಣರಾಗಿದ್ದರು. ಅಂದು ಹೋರಾಡುವಾಗ ಅನುಭವಿಸಿದ ವಿದ್ಯೆ ಇಂದು ಪರಿಪಕ್ವಗೊಂಡಿತ್ತು. ಯುದ್ಧ ಮುಗಿದಮೇಲೆ ಕಮ್ಯುನಿಸ್ಟರು ಬ್ರಿಟಿಶರ ವಿರುದ್ಧ ಶಸ್ತ್ರವನ್ನು ಹಿರಿದರು. ಮಲಾಯಾದಲ್ಲಿ ಯುರೋಪಿಯನ್ನರು ತೀರ ಅಲ್ಪ ಸಂಖ್ಯಾಕರಿದ್ದರೂ, ಸಾಮಾನ್ಯವಾಗಿ ಎಲ್ಲ ರಬ್ಬರು ತೋಟಗಳ ಒಡೆತನವು ಅವರಕಡೆಗಿದೆ. ಈ ರಬ್ಬರು ತೋಟಗಳಿಂದ ಅವರ ಸಂಪತ್ತು ದಿನೇ ದಿನೇ ವೃದ್ಧಿಯಾಗತೊಡಗಿದೆ. ಆದರಲ್ಲಿ ದುಡಿಯುವ ಚೀನೀ ಮತ್ತು ಭಾರತೀಯ ಕೂಲಿಗಳು ದುಡಿದು ದುಡಿದು ಬಡವರಾಗಿ ಹೀನ ಸ್ಥಿತಿಗಿಳಿಯುತ್ತಿದ್ದಾರೆ. ಒಡೆದು ಕಾಣುವಂಥ ಈ ಆರ್ಥಿಕ ವಿಷಮತೆಯಿಂದ ಕಮ್ಯುನಿಝಂ ಭರದಿಂದ ಬೆಳೆಯತೊಡಗಿದೆ.

ಚೀನಿಯರೂ ದೇಶದ ವ್ಯಾಪಾರವನ್ನು ತಮ್ಮ ಕೈಯಲ್ಲಿ ಹಿಡಿದುಕೊಂಡು, ಆ ದೇಶದ ಸಾಂಪತ್ತಿಕ ಸ್ಥಿತಿಗತಿಯ ಬೆನ್ನೆಲುಬುವಾಗಿ ನಿಂತುಕೊಂಡಿದ್ದಾರೆ. ದೇಶದ ಉನ್ನತಿಗಾಗಿ ಕೈ ಭಾರ ಹಚ್ಚಿದವರೆಂದರೆ, ಚೀನೀಯರು ಮತ್ತು ಭಾರತೀಯರು. ಬ್ರಿಟಿಶರು ಆಳರಸರಾಗಿದ್ದುದರ ಮೂಲಕ ಅವರು ಆ ದೇಶ ಕ್ಕಾಗಿ ಮಾಡಿದ ಉಪಕಾರ— ಉಪಕಾರದ ಸದರಿನಲ್ಲಿ ಬರಲಾರದು. ದೇಶದ

ಮೂಲನಿವಾಸಿ ಮಲಾಯು ಈ ಸಂದರ್ಭಗಳಲ್ಲಿ ಸ್ವಲ್ಪ ಹಿಂದೆಯೇ ಉಳಿಯು ತ್ತಾನೆ. ಆದರೂ ಮನೆಯ ಒಡೆಯ ಎಂಬ ಮಾತಿನಿಂದ ಆತನ ಕೈಯಲ್ಲಿ ಅಧಿಕಾರ ಹೋಗುವದು ಸರಿಯಾದುದು ಎಂದು ಎಲ್ಲರೂ ಬಗೆಯುತ್ತಾರೆ. ಆದರೆ ಉಳುವವನೇ ಹೊಲದೊಡೆಯ ಎಂಬ ತಾತ್ವಿಕ ಹಿನ್ನಲೆಯಲ್ಲಿ ನಿಂತು ಕೊಂಡು ವಿಚಾರಿಸುತ್ತಿರುವ ಚೀನೀಯರು ಸಹಜವಾಗಿ 'ಕಮ್ಯುನಿಝಂ' ಗುಂಪನ್ನು ಸೇರಿಕೊಂಡು, ಅವರ ಚಟುವಟಿಕೆಗಳಲ್ಲಿ ಭಾಗವಹಿಸತೊಡಗಿದರು.

ತೀರ ಇತ್ತೀಚಿಗಂತೂ ಕಮ್ಯುನಿಸ್ಟರ ಚಟುವಟಿಕೆಗಳು ಹೆಚ್ಚಾಗತೊಡಗಿ ದವು. ಆಗ ಬ್ರಿಟಿಶರು ಹಿಂದುಸ್ಥಾನಕ್ಕೆ ಸ್ವಾತಂತ್ರ್ಯ ಕೊಡಮಾಡಿದ ಸಮಯ ದಲ್ಲಿ ತಮ್ಮ ಪಾಲಿಗೆ ಬಂದ ೪ ಗುರ್ಖಾ ಬಟಾಲಿಯನ್ನುಗಳಲ್ಲಿ ಕೆಲವು ಬಟಾಲಿಯನಗಳನ್ನು ಮಲಾಯಾದಲ್ಲಿ ಕಮ್ಯುನಿಸ್ಟರ ವಿರುದ್ಧ ಹೋರಾಡುವದ ರಲ್ಲಿ ತೊಡಗಿಸಿದರು.

ಆದರೂ ಅವರನ್ನು ಸಂಪೂರ್ಣವಾಗಿ ಬಗ್ಗುಬಡೆಯುವದು ಸಾಧ್ಯವಾಗ ಲಿಲ್ಲ. ಮಲಾಯಾದೇಶದ ಯಾವದೇ ಸಾರ್ವಜನಿಕ ಸ್ಥಳದಲ್ಲಿ ಭಯೋತ್ಪಾದ ಕರ ಫೋಟೋಗಳನ್ನು ತಗಲುಹಾಕಿ-- ಇಂಥವರನ್ನು ಸಜೀವ— ಇಲ್ಲವೇ ನಿರ್ಜೀವವಾಗಿ ಹಿಡಿದುಕೊಟ್ಟವರಿಗೆ ೫೦೦೦ ಡಾಲರು ಇನಾಮು ಎಂಬ ಸಾಯಿನ್ ಬೋರ್ಡುಗಳು ಕಾಣಸಿಗುತ್ತವೆ. ಇಂಥ ದಾರುಣ ಪರಿಸ್ಥಿತಿಯಲ್ಲಿ ಬ್ರಿಟನ್ನು ಮಲಾಯಾಕ್ಕೆ ಸ್ವಾತಂತ್ರ್ಯವನ್ನು ದಯಪಾಲಿಸಿತು.

ಈ ಒಳಗಿನ ರೋಗ— ಸ್ವಾತಂತ್ರ್ಯದ ಔಷಧದಿಂದ ವಾಯುವಾಗು ತ್ತದೋ ಪ್ರಜ್ವಲಿಸುತ್ತದೋ ದೇವರೇ ಬಲ್ಲ.

ಇದಿಷ್ಟು ಮಲಾಯಾದ ಸಂಕ್ಷಿಪ್ತ ಪರಿಚಯ.

೧೩

ನಾವು ನಮ್ಮ ಪ್ರವಾಸದಲ್ಲಿ ಅಲೋರಸ್ಟಾರನ್ನು ಮುಟ್ಟಿದಬಳಿಕ ನಮ್ಮ ಕಂಪನಿ ತಳ ಊರಿದ ವಿಷಯವಾಗಿ ಸ್ಟೇಶನ್ನಿನಲ್ಲಿಯೇ ಇದ್ದ ಮಿಲ್ಟ್ರಿ ಆಫೀಸರಲ್ಲಿ ವಿಚಾರಿಸಿದೆವು. ನಮ್ಮ ಕಂಪನಿ ಆಗಲೇ 'ಇಪೋ' ಊರಿಗೆ ಪ್ರಯಾಣ ಮಾಡಿದ ಸುದ್ದಿ ತಿಳಿಯಿತು. ನಾವು ಹಾಗೆಯೇ ಮರುಳಿದೆವು. ದಾರಿಯಲ್ಲಿ 'ಪ್ರಾಯರ್' ಸ್ಟೇಶನ್ನಿನಲ್ಲಿ ತಂಗಿದೆವು. ಆಗ ಸುಮಾರು ಮಧ್ಯಾಹ್ನ ೨ ಹೊಡೆದಿತ್ತು. ಪ್ರಾಯ ಸ್ಟೇಶನ್ನು ಮಲಾಯಾದ ಕಡಲ ತಡಿಯಲ್ಲಿದ್ದ ಸ್ಟೇಶನ್ನು. ಅಲ್ಲಿ ಇಳಿದು— ೨ ಮೈಲುಗಳ ವರೆಗೆ ಮೋಟಾರು ಬೋಟಿನಲ್ಲಿಂದ ಸಮುದ್ರದಲ್ಲಿ ಪ್ರವಾಸ ಮಾಡಿದರೆ ಮಲಾಯಾದ ಪ್ರಸಿದ್ಧ ಪಟ್ಟಣ 'ಪೆನಾಂಗ' ಹತ್ತುತ್ತದೆ. ಪೆನಾಂಗಕ್ಕೆ ಇನ್ನೊಂದು ಹೆಸರು ಇದೆ. "ಜಾರ್ಜ ಟೌನ್" ಎಂದು. ಆದರೆ ಬಳಿಕೆಯಲ್ಲಿ ಪೆನಾಂಗವೆಂದೇ ಇದೆ. ಪೆನಾಂಗವೆಂದರೆ ಅಡಿಕೆ ಗಿಡಗಳ ತೋಟವೆಂದು ಮಲಾಯಾ ಭಾಷೆಯಲ್ಲಿಯ ಅರ್ಥ. ನಾವು ಪ್ರಾಯ ಸ್ಟೇಶನ್ನಿನಲ್ಲಿಳಿದು— ಒಂದೆಡೆಯಲ್ಲಿ ಅಡಿಗೆಯನ್ನು ಮಾಡಿಕೊಂಡು ೪॥ ಘಂಟೆಗೆ ಪೆನಾಂಗಿನತ್ತ ನಡೆದೆವು. ಪೆನಾಂಗ ಪಟ್ಟಣವನ್ನೆಲ್ಲ ಸುತ್ತುಹಾಕಿ ಸಂಜೆ ೯ರ ಸುಮಾರಿಗೆ ಮತ್ತೆ ಪೆನಾಂಗ ಸಿಪ್‌ಯಾರ್ಡಿಗೆ ಬಂದು ಮೋಟಾರು ಬೋಟಿಗಾಗಿ ಕಾದು ನಿಂತೆವು.

ನಾನು ನಿಂತಲ್ಲಿ ಒಬ್ಬ ಬಿಳಿಯ ಸೈನಿಕ ಬಂದು ವಿನಂತಿಸಿಕೊಂಡ.

"Seargent, you want to buy my watch?" (ಹವಾಲ್ದಾರ ಈ ನನ್ನ ವಾಚನ್ನು ಮಾರಲು ತೆಗೆದುಕೊಳ್ಳುವಿಯಾ) ಎಂದು ಕೇಳಿ ತನ್ನ ರಿಸ್ಟವಾಚನ್ನು ತೋರಿಸಿದ. ನಾನು ಮೊದಲು ಆತನನ್ನು ಬ್ರಿಟಿಶ ಸೈನಿಕನೆಂದು ತಿಳಿದಿದ್ದೆ. ನಾನು ಆತನ ಪ್ರಶ್ನೆಗೆ ಉತ್ತರವಿತ್ತಿದೆ.

"How much you say?" (ಎಷ್ಟು ಬೆಲೆ?)

"Give me 100 Dollars" (ಒಂದು ನೂರು ಡಾಲರು ಕೊಡಿ).

"Sorry I have not got so much" (ಕ್ಷಮಿಸಿ. ನನ್ನ ಹತ್ತಿರ ಅಷ್ಟೊಂದು ರಕಂ ಇಲ್ಲ.)

"At least 80 dollars ?"

"Sorry"

"Come on, fifty dollars."

"I have only 30 dollers. If you can give me for 30, I am ready to purchare the watch."

"I am very sorry sergeant."

"Leave it. You are from what province ?"

(ಹೋಗಲಿ ಬಿಡಿ ಆ ವಿಷಯ. ತಾವು ಯಾವ ಪ್ರಾಂತದಿಂದ ಬಂದಿದ್ದೀರಿ ?)

"I am from Holland" (ನಾನು ಹಾಲೆಂಡಿನಿಂದ ಬಂದಿದ್ದೇನೆ)

"Is it so ? I shought you an English soldier." (ಹೀಗೋ, ನಾನು ತಮ್ಮನ್ನು ಆಂಗ್ಲ ಸೈನಿಕನೆಂದು ಭಾವಿಸಿದ್ದೆ.)

"No. I am apoor soldier from Holland." (ಅಲ್ಲ. ನಾನು ಹಾಲೆಂಡಿನ ಬಡ ಸೈನಿಕ.)

ನಮ್ಮಿಬ್ಬರಲ್ಲಿ ಕೆಲವೇ ನಿಮಿಷಗಳಲ್ಲಿ ಗೆಳೆತನ ಮೂಡಿತು. ಆತನಿಗೆ ಬೀರ ಚಟವಾಗತೊಡಗಿತ್ತೆಂದು ಕಾಣಿಸಿತು. ನಾನು ಆತನನ್ನು ಆಮಂತ್ರಿಸಿ ಹತ್ತಿರವೇ ಇದ್ದ NAAFI (ನೆವ್ಹಿ ಆರ್ಮಿ ಏರ್‌ಫೋರ್ಸ Institution) ಕ್ಯಾಂಟನಿಗೆ ಕರೆದೊಯ್ದೆ. ಅಲ್ಲಿ ಇಬ್ಬರು ಎರೆಡೆರಡು ಬೀರು ಬಾಟಲ್ಲುಗಳನ್ನು ಕುಡಿದು ಹೊರಗೆ ಬಂದೆವು. ಇಬ್ಬರೂ ಒಬ್ಬರೊಬ್ಬರ ಅಪ್ಪಣೆ ಪಡೆದು ಹೊರಟೆವು. ನಾನು ಮತ್ತೆ ನಮ್ಮ ಸೈನಿಕರನ್ನು ಕೂಡಿಕೊಂಡು, ಪ್ರಾಯಕ್ಕೆ ಬಂದು ಮಲಗಿಕೊಂಡೆವು. ಮರುದಿನ ಮತ್ತೆ ಪ್ರಯಾಣವನ್ನು ಮುಂದುವರೆಸಿ ಬುಕಿಟ್ ಮರ್ಟಜಾಮ ಊರಲ್ಲಿಳಿದು ಊಟವನ್ನು ಮಾಡಿ, ಅಲ್ಲಿಯ ಚೀನೀ ಗುಡಿಯನ್ನು ಸಂದರ್ಶಿಸಿ ಮರಳಿ ಸ್ಟೇಶನ್ನಿನ ಪ್ಲ್ಯಾಟಫಾರ್ಮಿನಲ್ಲಿಯೇ ಚಹವನ್ನು ತಯಾರಿಸಿದೆವು.

ನಾನು ಮುಖವನ್ನು ತೊಳೆದುಕೊಂಡು ಬರಲು ನಲ್ಲಿಯ ಹತ್ತಿರ ಬಂದಾಗ ೫-೬ ಜನ ಬ್ರಿಟಿಶ ಸೈನಿಕರು ನನ್ನನ್ನು ಮಾತನಾಡಿಸಿದರು. ಅವರಿಗೆ ರೆಸ್ಟಕ್ಯಾಂಪದ ವಿಳಾಸ ಬೇಕಿತ್ತು.

"Where is the rest camp here ?"

ಅವರು ಅತಿ ವೇಗವಾಗಿ ಮಾತುಗಳನ್ನಾಡಿದ್ದರಿಂದ ಅರ್ಥವಾಗಲಿಲ್ಲ. ನಾನು ಸ್ವಲ್ಪ ಗೊಂದಲದಲ್ಲಿ ಬಿದ್ದವನಂತೆ ನಿಂತುಕೊಂಡೆನು. ನನ್ನ ಈ ಅವಸ್ಥೆಯನ್ನು ನೋಡಿ ಅವರು ತಮ್ಮ ತಮ್ಮಲ್ಲಿ ಮಾತನಾಡಿಕೊಂಡರು.

" He doesnot know English. "

(ಈತನಿಗೆ ಇಂಗ್ಲಿಷ ಬರುತ್ತಿಲ್ಲ)

ನಾನು ಒಮ್ಮೆಲೇ ಕೂಗಿದೆ.

" I know English "

ಆಗ ಆತ ನಕ್ಕು ಹತ್ತಿರ ಬಂದು ಕೇಳಿದ.

" ಇಲ್ಲಿ ಎಲ್ಲಾದರೂ ರೆಸ್ಟ್ಕ್ಯಾಂಪ, ಅಥವಾ ಮಿಲ್ಟ್ರಿ ಕ್ಯಾಂಟೀನ ಇದ್ದರೆ ಹೇಳುವಿರಾ ? ನಮಗ್ಗೆ ಚಹ ಬೇಕಾಗಿದೆ ".

ನಾನು ಅವರ ಚಹದ ಸಂಕಟವನ್ನು ಅರ್ಥ ಮಾಡಿಕೊಂಡು ಹೇಳಿದೆ.

" ನಾನೂ ನಿಮ್ಮಂತೆ ಇಲ್ಲಿ ಹೊಸಬ. ನಿಮಗೆ ಚಹವೇ ಬೇಕಿದ್ದರೆ—ನಾವು ಟಿನ್ ಮಿಲ್ಕಿನಿಂದ ತಯಾರಿಸಿದ ಚಹವಿದೆ. ನನ್ನ ಜತೆಯಲ್ಲಿ ನಡೆಯಿರಿ ಚಹ ಕೊಡುವೆ ".

ಅವರೆಲ್ಲ ನನ್ನನ್ನು ಹಿಂಬಾಲಿಸಿದರು. ನಾನು ನನ್ನ ಗುಂಪಿಗೆ ಬಂದು ಅವರೆಲ್ಲರಿಗೂ ಒಂದೊಂದು ಮಗ್ ತುಂಬಾ ಚಹವನ್ನು ಕೊಟ್ಟೆನು. ಅವರಿಗೆ ಆ ಚಹ ನೋಡಿ ಎಲ್ಲಿಲ್ಲದ ಆನಂದವಾಗಿತ್ತು. ಮಲಾಯಾದಲ್ಲಿ ಆದೇ ಯುದ್ಧ ಮುಗಿದುದರಿಂದ ಹೊರಗಿನ ಸರುಕು ಬರುವಂತಿರಲಿಲ್ಲ. ಹೀಗಾಗಿ ನಾಗರಿಕರ ಚಹದ ಅಂಗಡಿಯಲ್ಲಿ ಒಂದೊಂದು ಕಪ್ಪಿಗೆ ೬೦ ನಯೆ ಪೈಸೆ (ಸೆಂಟ್ಸ) ಕೊಡ ಬೇಕಾಗುತ್ತಿತ್ತು. ಮಿಲ್ಟ್ರಿ ಕ್ಯಾಂಟೀನವಿದ್ದರೆ ಅಲ್ಲಿ ನಮಗೆ ಒಂದಾಣೆಗೆ ಕಪ್ಪು ಸಿಗುತ್ತಿತ್ತು. ಎಲ್ಲಕಡೆಗೂ ಮಿಲ್ಟ್ರಿ ಕ್ಯಾಂಟೀನುಗಳಿರುತ್ತಿರಲಿಲ್ಲ. ಹೀಗಾಗಿ ಆ ಬಡಪಾಯಿ ಸೈನಿಕರಿಗೆ ನಾವಿತ್ತ ಚಹಾ ಅಪರೂಪದ್ದಾಗಿತ್ತು.

ಸಾಯಂಕಾಲ ನಾವು ನಮ್ಮ ಪ್ರವಾಸ ಮುಂದುವರೆಸಿ ಇಪೋ ನಗರ ವನ್ನು ತಲುಪಿದೆವು.

## ಇಪೋ ವಾಸ್ತವ್ಯ

ಇಪ್ರೋ ಮಲಾಯಾದಲ್ಲಿಯ ಒಂದು ದೊಡ್ಡ ನಗರ. ಮಲಾಯಾದ ಪೆರಾಕ ಸಂಸ್ಥಾನದ ರಾಜಧಾನಿ. ಇದರ ಹತ್ತಿರವೇ ಕಿಂಟಾವ್ಯಾಲಿ (Kinta valley) ತವರಿನ ಖಣಿಗಳು ಹೆಸರಾದದ್ದು ಇದೆ. ಇಪೋ ವ್ಯಾಪಾರದ ಪಡಿಮೂಲೆಯ ಸ್ಥಳವಾಗಿದೆ. ನಾವಿಲ್ಲಿ ಸುಮಾರು ನಾಲ್ಕು ತಿಂಗಳುಗಳವರೆಗೆ ವಾಸವಾಗಿದ್ದೆವು.

ಈ ಊರಲ್ಲಿ ಒಂದು ಘಟನೆ ನಡೆಯಿತು. ನಾವಿದ್ದ ಸ್ಥಳದಿಂದ ಸುಮಾರು ಮೂರು ಮೈಲುಗಳ ಮೇಲೆ ಮದ್ರಾಸ ಬಟಾಲಿಯಿನ್ ತಳ ಊರಿತ್ತು. ಅದರ ಮುಂದುಗಡೆಯಲ್ಲಿ ಡಚ್ ರೆಜಿಮಂಟು ತಳ ಊರಿತ್ತು. ಈ ಎರಡೂ ಬಟಾಲಿಯಿನ್‌ಗಳ ನಡುವೆ ಒಂದು ಡಾಂಬರ ರೋಡು ಹಾದು ಹೋಗುತ್ತಿದೆ.

ಒಂದು ಸಂಜೆ — ಡಚ್ ಅಧಿಕಾರಿ, ಒಬ್ಬ ಮಲಾಯು ಯುವತಿಯೊಂದಿಗೆ (ಕೈಯಲ್ಲಿ ಕೈಯಿಕ್ಕಿ) ಪೇಟೆಯತ್ತ ನಡೆದಿದ್ದ. ದಾರಿಯಲ್ಲಿ ಒಬ್ಬ ಸೀಖ ಸೈನಿಕ ಕುಡಿದು ಮತ್ತನಾಗಿ— ಆ ಅಧಿಕಾರಿಯ ಜೊತೆಯಲ್ಲಿದ್ದ ಮಲಾಯು ಯುವತಿಯನ್ನೂ ಹಿಡಿದೆಳೆದ. ಡಚ್ ಅಧಿಕಾರಿಯೂ ಅಂಜಿಹೋದ. ಆತ ಕತಿಗಾಣದೆ ಸೊಂಟಕ್ಕೆ ಸಿಲುಕಿಸಿದ ಪಿಸ್ತೂಲಿನಿಂದ ಆಕಾಶದಲ್ಲಿ ಒಂದೆರಡು ಗುಂಡುಗಳನ್ನು ಹಾರಿಸಿದ.

ಈ ದೃಶ್ಯವನ್ನು ದೂರಿನಿಂದ ಒಬ್ಬ ಮದ್ರಾಸಿ ಸೈನಿಕ ತನ್ನ ತಂಬೂವಿನಲ್ಲಿಂದ ಕಂಡು ಕೂಗಿಕೊಂಡ. ಭಾರತೀಯರ ಮೇಲೆ ಡಚ್‌ರವನೊಬ್ಬ ಗುಂಡು ಹಾರಿಸಿದ ಎಂದು ಕೂಗನ್ನೆಬ್ಬಿಸಿದ. ಸರಿ ಹುಚ್ಚೆದ್ದು ಮದ್ರಾಸಿ ಕೆಲ ಸೈನಿಕರು ತಮ್ಮ ಎದುರುಗಡೆಯಲ್ಲಿದ್ದ ಡಚ್ ತಂಬೂಗಳ ಮೇಲೆ ರಾಯಫಲ್ ಗುಂಡು ಹಾರಾಡಿಸತೊಡಗಿದರು. ಡಚ್ ಸೈನಿಕರು ಒಮ್ಮೆಲೇ ಘಾಬರಿಯಾಗಿ ಪ್ರತಿಯಾಗಿ ಗುಂಡನ್ನು ಹಾರಿಸತೊಡಗಿದರು. ಒಂದು ಚಿಕ್ಕ ಯುದ್ಧವೇ ನಡೆದಂತಾಯಿತು.

ಆದರೆ ಸುದೈವದಿಂದ ಕೆಲವೇ ನಿಮಿಷದಲ್ಲಿ ಪಂಜಾಬ ರೆಜಿಮೆಂಟು ಅಲ್ಲಿ ಧಾವಿಸಿ ಪರಿಸ್ಥಿತಿಯನ್ನು ಹತೋಟಿಯಲ್ಲಿ ತಂದಿತು.

ಈ ಚಕಮಕಿಯಲ್ಲಿ ಸತ್ತವರ ಸಂಖ್ಯೆ ಹೊರಗಿನವರಿಗೆ ಯಾರಿಗೂ ತಿಳಿಯಗೊಡಲಿಲ್ಲ. ಕಾರಣ ತೀರ ಸಣ್ಣದು, ಪರಿಣಾಮ ದೊಡ್ಡದಾಗಿತ್ತು.

## ಇಪ್ಪೋದಲ್ಲಿ ನೆಹರೂರ ದರ್ಶನ

ಶ್ರೀ ಜವಾಹರಲಾಲ ನೆಹರೂರವರು ಸಿಂಗಾಪೂರಿಗೆ ಬಂದ ಸುದ್ದಿ ಪೇಪರಿನಲ್ಲಿ ಅಚ್ಚಾಗಿತ್ತು. ಅವರು ಇಪ್ಪೋಕ್ಕೂ ಬರುವ ಸುದ್ದಿಯೂ ತಿಳಿದಿತ್ತು. ಸುದೈವದಿಂದ ಅವರು ಇಪ್ಪೋಕ್ಕೆ ಆದಿತ್ಯವಾರದ ದಿನ ಬರುವವರಿದ್ದರು(ಸುಮಾರು ೧೯೪೬ ರ ಫೆಬ್ರುವರಿ ಅಥವಾ ಮಾರ್ಚ ತಿಂಗಳವಿರಬಹುದು, ತಾರೀಖು ಅಷ್ಟು ಸರಿಯಾಗಿ ನೆನಪಿಲ್ಲ).

ಊರ ನಟ್ಟ ನಡುವೆ ಇದ್ದ ದೊಡ್ಡ ಬಯಲಿನಲ್ಲಿ ಅವರ ಭಾಷಣದ ಏರ್ಪಾಡನ್ನು ಮಾಡಲಾಗಿತ್ತು. ಹೊರದೇಶದಲ್ಲಿ ಸೈನಿಕರಿಗೆ ಅಷ್ಟೊಂದು ನಿರ್ಬಂಧಗಳಿರುವದಿಲ್ಲ, ಮೇಲಾಗಿ ನೆಹರೂರವರು ರವಿವಾರ ದಿನ ಇಪ್ಪೋಕ್ಕೆ ಬರುವವರಿದ್ದರು. ರವಿವಾರ ರಜೆಯ ದಿನ, ನಾವೆಲ್ಲ ಸುಮಾರು ೩ ಘಂಟೆಗೆ ಆ ಸ್ಥಳವನ್ನು ತಲುಪಿದೆವು. ನಮ್ಮ ಕಂಪನಿಯಲ್ಲಿ ಎಲ್ಲ ಜಾತಿಯ ಜನರಿದ್ದರು. ( ಮುಸ್ಲಿಂ ಮತ್ತು ಹಿಂದು ) ನಮ್ಮ ಕಂಪನಿಯ ಪ್ರತಿ ಪಿಳ್ಳೆಯೂ ಅಲ್ಲಿ ಬಂದಿತ್ತು. ಅಲ್ಲಿ ಬಂದಾಗ ನಮಗೆ ಹೆಚ್ಚಿನ ಆಶ್ಚರ್ಯವೆಂದರೆ ಸಭಾ ಪೀಠದ ಹತ್ತಿರವಿದ್ದ ೫ ಡಾಲರು ಟಿಕೇಟುಗಳ ಖುರ್ಚಿಯ ಮೇಲೆ ನಮ್ಮ ಆಫೀಸರ ಕಮಾಂಡಿಂಗ ಮೇಜರ ಎಲ್. ಇ. ಪಿಕ್‌ಫೋರ್ಡ ಮತ್ತು ಅಡ್ಜುಟಂಟ ಕ್ಯಾಪ್ಟನ್ ಡಕ್ಸಬರಿಯವರು ಕುಳಿತಿದ್ದರು. ಕೇವಲ ನೂರು ನೂರೈವತ್ತು ಖುರ್ಚಿಗಳಿಗಷ್ಟೇ ಟಿಕೇಟುಗಳನ್ನಿಡಲಾಗಿತ್ತು. ಕೂಡಿದ ಜನಜಂಗುಳಿಯತ್ತ ನೋಡಿದೆ. ಭಾರತೀಯರಂತೂ ತುಂಬಿದ್ದರು. ಅದೇನೂ ಆಶ್ಚರ್ಯದ ಮಾತಲ್ಲ. ಆದರೆ ಚಿನೀಯರು, ಆಂಗ್ಲ ಸೈನಿಕರು, ಮಲಾಯಿಗಳು, ಡಚ್ ಸೈನಿಕರು ಬಹುಸಂಖ್ಯೆಯಲ್ಲಿ ಬಂದು ನೆರೆದಿದ್ದರು. ಶ್ರೀ ನೆಹರೂರವರು ವೇಳಾಪತ್ರಿಕೆಯಂತೆ ನಾಲ್ಕು ಘಂಟೆಗೆ ಬರಬೇಕಿತ್ತು. ಐದು ಘಂಟೆಯಾದರೂ ಬರಲಿಲ್ಲ. ಆದರೂ ಜನವೆಲ್ಲ ತಾಳ್ಮೆಯಿಂದ ಕುಳಿತುಕೊಂಡಿದ್ದರು. ಆ ಸಭೆಯನ್ನು ನಿಯಂತ್ರಿಸುತ್ತಿದ್ದ ಸೀಖನೊಬ್ಬ ಅಝಾದ ಹಿಂದ ಸೇನೆಯ ಸಮವಸ್ತ್ರವನ್ನು ಧರಿಸಿದ್ದ. ಆತ ಹಿಂದಕ್ಕೆ ಅಝಾದ ಹಿಂದ ಸೇನೆಯಲ್ಲಿದ್ದವನು. ಆತ ಸಭಾ ಪೀಠದ ಮೇಲಕ್ಕೆ ಬಂದು ಹಿಂದಿಯಲ್ಲಿ ಮಾತಾಡತೊಡಗಿದ.

"ಶ್ರೀ ನೆಹರೂರವರು ಈಗ ಹದಿನೈದು ನಿಮಿಷಗಳಲ್ಲಿ ಬರುವರು. ಅವರು ಬಂದಾಕ್ಷಣ ತಾವೆಲ್ಲ ಎದ್ದು ನಿಂತುಕೊಂಡು ಮತ್ತೆ ಕುಳಿತುಕೊಂಡು ಬಿಡಬೇಕು. ನೂಕುನುಗ್ಗಲು ಮಾಡಬಾರದು. ಈ ಹಿಂದೆ ಇದೇ ಸ್ಥಳದಲ್ಲಿ ನೇತಾಜಿಯವರು ಬಂದಾಗ್ಗೆ ತಾವೆಲ್ಲ ಅವರನ್ನು ಕಾಣುವ ಕುತೂಹಲದಿಂದ ನೂಕುನುಗ್ಗಲು ಮಾಡಿ ಗದ್ದಲ ಮಾಡಿದ್ದಿರಿ. ಈಗ ಮಾತ್ರ ಹಾಗೆ ದಯ ವಿಟ್ಟು ಮಾಡಬಾರದು. ಜಯಹಿಂದ."

ಆ ಮನುಷ್ಯನ ಭಾಷಣ ಕೇಳುತ್ತಿರುವಂತೆ ನಾನು ನೇತಾಜಿಯವರ ಬಗೆಗೆ ವಿಚಾರಿಸತೊಡಗಿದೆ. ಅವರು ಇದೇ ದೇಶದಲ್ಲಿ ತಾತ್ಕಾಲಿಕ ಸ್ವತಂತ್ರ ಭಾರತ ಸರಕಾರವನ್ನು ರಚಿಸಿದರು. ಈ ದೇಶದಲ್ಲಿಯಂತೂ ನಾನು ಕಾಲಿರಿಸಿ ದ್ದೇನೆ. ಅವರು ಈ ಹಿಂದೆ ಇದೇ ಜೈಲಲ್ಲಿ ನಿಂತುಕೊಂಡು ಭಾಷಣ ಮಾಡಿ ದ್ದಾರೆ. ಅದೇ ಜೈಲಿನಲ್ಲಿ ನಿಲ್ಲುವ ಸೌಭಾಗ್ಯ ನನ್ನದಾಗಿದೆ. ಆದರೆ ಏನು? ಅವರನ್ನು ಕಾಣುವ ಸೌಭಾಗ್ಯ ಮಾತ್ರ ನನಗಿಲ್ಲವಾಯಿತಲ್ಲ ಎಂದು ಹಳಹಳಿ ಸುವ ವೇಳೆಗಾಗಲೇ ಶ್ರೀ ನೆಹರೂರವರು ಬಂದರು. ಜನರೆಲ್ಲ ಒಂದು ಸಲ ಎದ್ದು ನಿಂತು ಮತ್ತೆ ಕುಳಿತುಕೊಂಡರು. ಆ ಸೀಖ ಮನುಷ್ಯ ಮಾನಪತ್ರವನ್ನು ಓದತೊಡಗಿದ. ಆಗ ನೆಹರೂರವರು ಖುರ್ಚಿಯನ್ನು ಬಿಟ್ಟು ಟೇಬಲ್ಲಿನ ಮೇಲೆ ಕುಳಿತುಕೊಂಡಿದ್ದರು. ಚೂಡಿದಾರ ಪಾಯಜಾಮಾ, ನೆಹರೂ ಶರ್ಟ ಮತ್ತು ಜಾಕೇಟನ್ನು ಧರಿಸಿದ್ದರು. ತಲೆಯಮೇಲೊಂದು ಗಾಂಧಿ ಟೊಪ್ಪಿಗೆ ಇದ್ದಿತು. ಮಾನಪತ್ರ ಓದುವ ಕಾರ್ಯ ನಡೆದಿತ್ತು. ನಮಗೆ ಅದರತ್ತ ಗಮನವೇ ಇರಲಿಲ್ಲ. ನಾವು ಕಣ್ತುಂಬ ಶ್ರೀ ನೆಹರೂರವರನ್ನು ನೋಡುತ್ತಲಿದ್ದೆವು. ಮಾನಪತ್ರ ಓದುವದು ಮುಗಿದ ಬಳಿಕ ನೆಹರೂರವರು ಎದ್ದು ನಿಂತು ಭಾಷಣ ವನ್ನು ಪ್ರಾರಂಭಿಸಿದರು. ಅವರಾಡಿದ ವಾಕ್ಯಗಳು ಇನ್ನೂ ನೆನಪಿವೆ. ನೆಹರೂ ರವರು ಭಾಷಣವನ್ನು ಇಂಗ್ಲಿಷಿನಲ್ಲಿಯೇ ಪ್ರಾರಂಭಿಸಿದರು:

"Malayans, Indians, Chinese and Eurosians, I will first talk in my mother tongue that is in Hindi and then talk in English which will be translated into many other languages"

ಇಷ್ಟನ್ನು ಹೇಳಿ ಮುಂದೆ ಹಿಂದೀ ಭಾಷೆಯಲ್ಲಿ— ಭಾರತದ ಸ್ವಾತಂತ್ರ್ಯ ಸಂಗ್ರಾಮದ ವಿಷಯವಾಗಿ ಮಾತಾಡಿದರು. ಅವರು ಹಿಂದಿಯಲ್ಲಿ ಮಾತನಾಡು

ತ್ತಿರುವಾಗ ಮಳೆ ಬೀಳಲು ಪ್ರಾರಂಭಿಸಿತು. ಮಳೆ ಬೀಳತೊಡಗಿದರೂ ಜನವೆಲ್ಲ ಹಾಗೆಯೇ ಸ್ತಬ್ಧರಾಗಿ ಕುಳಿತಿದ್ದರು. ಹೆಂಗಸರ ಗುಂಪಿನಲ್ಲಿ ಸ್ವಲ್ಪ ಚಲಬಿಚಲತೆ ಕಂಡು ಬಂದಿತು ಆಗ ನೆಹರೂರವರು ಗದ್ದರಿಸಿದರು.

"ಬೈಠಿ ಜಾಯಿಯೇ – ಆಝಾದೀಕೆ ಲಿಯೆ ಲಢನೇವಾಲೇ ಬಾರಿಸಸೇ ಡರತೇ ನಹಿ"

ಎಂದು ಗದ್ದರಿಸಿ ಪುನಃ ಭಾಷಣವನ್ನು ಪ್ರಾರಂಭಿಸಿದರು. ಬಂಗಾಲದ ಕ್ಷಾಮದ ವಿಷಯವಾಗಿಯೂ ಮಾತು ಬಂದಿತ್ತು. ಆಗ ನೆಹರೂರವರು ಆ ಪರಿಸ್ಥಿತಿಯನ್ನು ಹೋಗಲಾಡಿಸಲು ಶ್ರಮಿಸದ ಬ್ರಿಟಿಶ ಸರಕಾರವನ್ನು ಟೀಕಿಸುತ್ತ "ಅಂಗ್ರೇಜತೋ ನಾಲಾಯಖ ಹೈ" ಎಂದು ಸ್ಪಷ್ಟ ನುಡಿಗಳನ್ನಾಡಿದರು. ೧೫ ನಿಮಿಷಗಳ ವರೆಗೆ ಹಿಂದಿಯಲ್ಲಿ ಮಾತನಾಡಿದ ಬಳಿಕ ಅವರು ಇಂಗ್ಲಿಷಿನಲ್ಲಿ ಪ್ರಾರಂಭಿಸಿದರು. ಅವರ ಮೊದಲ ವಾಕ್ಯವಿನ್ನೂ ಮರೆತಿಲ್ಲ— "We the leaders of India have started to write a new History of India and we have already turned over a page of it...." ಮುಂದೆ ಜಾಗತಿಕ ರಾಜಕಾರಣದ ವಿಷಯವಾಗಿಯೂ ಮಾತುಗಳನ್ನಾಡಿದರು. ಭಾಷಣದ ಕೊನೆಯಲ್ಲಿ "ಜಯಹಿಂದ" ಎಂದು ನುಡಿದು ಮತ್ತೆ ಟೇಬಲ್ಲಿನ ಮೇಲೆ ಕುಳಿತುಕೊಂಡರು. ಅವರ ಈ ಭಾಷಣ, ಚೀನೀ, ಮಲಾಯಿ ಮತ್ತು ತಮಿಳು ಭಾಷೆಗಳಿಗೆ ಭಾಷಾಂತರಿಸಲಾಯಿತು. ನಂತರ ನೆಹರೂರವರಿಗೆ 'ಇಪೋ'ದ ನಾಗರಿಕರು ಹಮ್ಮಿಣಿಯೊಂದನ್ನು ಅರ್ಪಿಸಿದರು. ನೆಹರೂರವರು ಆ ಹಮ್ಮಿಣಿಯನ್ನು ಇಪೋದ ಪೂರ ಬಾಯ್ಸ ಫಂಡಿಗೆ ಅರ್ಪಿಸಿದರು.

ಈ ವೇಳೆಗಾಗಲೇ ಕತ್ತಲು ಪಸರಿಸತೊಡಗಿದರು. ಅಲ್ಲಿಂದ ನೆಹರೂರವರು ಊರಲ್ಲಿಯೂ ಜಾಯನೀಜ ಅಸೋಶಿಏಶನ್ನಿಗೆ ಭೆಟ್ಟಿಯನ್ನಿತ್ತರು.

ಸ್ವದೇಶದಲ್ಲಿ ಕಾಣಸಿಗದ ನೆಹರೂರ ದರ್ಶನ ಪರದೇಶದ ಭೂಮಿಯ ಮೇಲೆ ನನಗಾಗಿತ್ತು. ಸಣ್ಣವನಿದ್ದಾಗ ನಾನು ಇಂಥ ಸುಪ್ರಸಂಗ ನನ್ನ ಜನ್ಮದಲ್ಲಿ ಬಂದೀತೆಂದು ಕನಸು ಮನಸಿನಲ್ಲಿಯೂ ಎಣಿಸಿರಲಿಲ್ಲ.

ಉತ್ಸಾಹಿತವಾದ ನಾನು ಯುನಿಟ್ಟಿಗೆ ಬಂದು ಒಂದು ಬಾಟಲ್ಲು ಬೀರನ್ನು ಕುಡಿದು ನಿಶ್ಚಿಂತನಾಗಿ ಮಲಗಿಕೊಂಡೆನು.

## ಇಪ್ಪೋದಲ್ಲಿಯ ಚೀನೀ ಮೆರವಣಿಗೆ

ಒಂದುದಿನ ಇಪ್ಪೋ ಊರಲ್ಲಿ ಅಡ್ಡಾಡುವಾಗ ಮೆರವಣಿಗೆ ಹೊರಟಿತ್ತು. ನಾನು ಕುತೂಹಲಿತನಾಗಿ ನೋಡಲು ನಿಂತೆ. ಚಾಂಗ-ಕೈ-ಶೇಕರ ಜನ್ಮ ದಿನದ ಮೆರವಣಿಗೆಯಾಗಿತ್ತು. ಮೆರವಣಿಗೆಯು ಮುಂಭಾಗದಲ್ಲಿ ಮೂರು ಭಾವ ಚಿತ್ರಗಳಿದ್ದವು. ಮೊದಲನೆಯದು ಜನರಾಲಿಸ್ಸಿಮೋ ಚಾಂಗ ಕೈ ಶೇಕ-ಮ್ಯಾಡಮ್ ಚಾಂಗ ಕೈಶೇಕ ಮತ್ತು ಶ್ರೀ. ನೆಹರೂವರದೊಂದು. ನೆಹರೂರ ಭಾವಚಿತ್ರ ಆ ಸಾಲಿನಲ್ಲಿ ನೋಡಿದಾಗ ನನಗೂ ಆಶ್ಚರ್ಯವಾಗಿತ್ತು. ಅವರ ಜನಪ್ರಿಯತೆಗೆ ಇದೊಂದು ಸಾಕ್ಷಿ ಎಂದು ತೋರಿಸುವದಕ್ಕಾಗಿ ಮೆರವಣಿಗೆ-ಯಂಥ ಸಣ್ಣ ವಿಷಯದ ಪ್ರಸ್ತಾಪಮಾಡಿದೆ ಅಷ್ಟೆ.

ಇಪ್ಪೋದಲ್ಲಿಂದ ನಮಗೆ ಕ್ಯಾಂಟನ ನಗರಕ್ಕೆ ಹೊರಡುವ ಆದೇಶ ಬಂದಿತು. ಕ್ಯಾಂಟನ್ ಪೂರ್ವ ಕಡಲ ತಡಿಯಲ್ಲಿಯ ಊರು. ಪಹಾಂಗ ಸಂಸ್ಥಾನದ ರಾಜಧಾನಿ. ಯಾವಾಗಲೂ ಒಂದು ಯುನಿಟ್ಟು ಸ್ಥಳಾಂತರಿಸು ವಾಗ— ಅದರಲ್ಲಿ ಮೂರು ಭಾಗಗಳನ್ನಾಗಿ ಮಾಡುತ್ತಾರೆ. ಒಂದು ಅಡ್ವಾನ್ಸ ಪಾರ್ಟಿ— ಇನ್ನೊಂದು ಮೇನ್ ಪಾರ್ಟಿ (ಮುಖ್ಯ ಭಾಗ) ಮೂರನೇಯದು ರೇಅರ ಪಾರ್ಟಿ. ಈ ಸಲವೂ ನಾನು ರೆಅರ ಪಾರ್ಟಿಯಲ್ಲಿಯೇ ಉಳಿದು ಕೊಂಡೆ. ಹೀಗಾಗಿ ನಾವು ೧೫-೨೦ ಸೈನಿಕರು ಕೋಲಾಲಂಪೂರ ರೆಸ್ಟ ಕ್ಯಾಂಪಿನಲ್ಲಿ ಕೆಲದಿನ ಪಾಳೆಯ ಹಾಕಿದೆವು.

## ಕೋಲಾಲಂಪೂರ ವಾಸ

ಕೋಲಾಲಂಪೂರ ಮಲಾಯಾದ ರಾಜಧಾನಿ— ಸುಂದರ ಸ್ಥಳ. ಕೋಲಾಲಂಪೂರಿನಲ್ಲಿ ಭಾರತೀಯ ಸೈನ್ಯದ ಬೇರೆ ಬೇರೆ ವಿಭಾಗಗಳು ತಳ ಊರಿದ್ದವು. ಎಲ್ಲಿ ನೋಡಿದಲ್ಲಿ ಭಾರತೀಯ ಸೈನಿಕರೇ ಕಾಣುತ್ತಿದ್ದರು. ಆಂಗ್ಲ ಸೈನಿಕರೂ ಇದ್ದಾರೆನ್ನಿ. ಈ ಊರಲ್ಲಿ ಒಂದು ವೈಚಿತ್ರವನ್ನು ನೋಡಿದೆ. ರಸ್ತೆಯ ಬದಿಯ ಗೋಡೆಗಳಮೇಲೆ ಮಿಲ್ಟ್ರಿ ಡಿಪಾರ್ಟಮೆಂಟಿನವರು ವಾಲ್ ಬಿಲ್ಲುಗಳನ್ನು ಹಚ್ಚಿದರು. ಆದರಲ್ಲಿ ಮಹಿಳೆಯೊಬ್ಬಳ ಚಿತ್ರ, ಮೇಲೆ ಕೆಳಗೆ ನಂತೆ ಒಕ್ಕಣಿಕೆ ಇದ್ದಿತು.

"DONT LET V. D.

This is the face that has Kissed many hundred JAPS.

Your family is waiting in India.

Your family is waiting in Engand."

("ಫರಂಗಿ ರೋಗವನ್ನು ಹಚ್ಚಿಕೊಳ್ಳಬೇಡಿ.

ಇದೇ ಹೆಣ್ಣಿನ ಮುಖ ಈ ಮೊದಲು ನೂರಾರು ಜಪಾನೀ ಸೈನಿಕರನ್ನು ಚುಂಬಿಸಿದೆ.

ನಿಮ್ಮ ಕುಟುಂಬ ಭಾರತದಲ್ಲಿ ನಿಮಗಾಗಿ ದಾರಿ ಕಾಯುತ್ತಿದೆ.

ನಿಮ್ಮ ಕುಟುಂಬ ಇಂಗ್ಲಂಡಿನಲ್ಲಿ ನಿಮಗಾಗಿ ದಾರಿ ಕಾಯುತ್ತಿದೆ.")

ಈ ಪೋಸ್ಟರುಗಳನ್ನು ಮಿಲ್ಟ್ರಿ ಖಾತೆಯವರೇ ಪ್ರಸಿದ್ಧಿಸಿದ್ದರು. ಇವು ಮಲಾಯಾದಲ್ಲಿಯ ಭಾರತೀಯ ಮತ್ತು ಆಂಗ್ಲ ಸೈನಿಕರನ್ನು ಎಚ್ಚರಿಸುವದಕ್ಕಾಗಿ ಪ್ರಕಟಿಸಲಾಗಿತ್ತು. ಈ ಮೊದಲು ಅದರ ವಿಷಯವೇ ಗೊತ್ತಾಗದ ನಮಗೆ ಎಲ್ಲೆಡೆಯಲ್ಲಿಯೂ ಅದೇ ದೆವ್ವ ಕಂಡಂತೆ ಭಾಸವಾಗತೊಡಗಿತು. ಮಲಾಯಾದಲ್ಲಿ V. D. (Venerial Disease) ತುಂಬಾ ಪಸರಿಸಿದ್ದಿತು.

ಯುದ್ಧ ಸಮಯದಲ್ಲಿ ಜಪಾನೀ ಸೈನಿಕರು ಮಲಾಯಾದಲ್ಲಿ ಚೀನೀ ಹೆಣ್ಣುಮಕ್ಕಳನ್ನು ಬಹಳವಾಗಿ ಕಾಡಿಸಿದ್ದರು. ಅದರ ಪರಿಣಾಮವಾಗಿ ವ್ಹಿ. ಡಿ. ಹಬ್ಬಿದ್ದಿತು.

ಈ ಕಾರಣಗಳ ಸಲುವಾಗಿ ಸೈನ್ಯಖಾತೆ–ಮುಂಜಾಗ್ರತೆಯನ್ನು ವಹಿಸಿದ್ದಿತು. ೧೫ ದಿನಗಳಿಗೊಮ್ಮೆ, ಎಲ್ಲ ಸೈನಿಕರ ದೇಹ ಪರೀಕ್ಷೆಯಾಗುತ್ತಿತ್ತು.

ಕೋಲಾಲಂಪೂರಿನಲ್ಲಿದ್ದಾಗ ನನಗೆ ಕೆಲ ಮಲಾಯಿ ಜನರ ಪರಿಚಯವಾಯಿತು. ಅದರಲ್ಲಿ ಅಬ್ದುಲ್-ಬಿನ್-ಅಹಮ್ಮದ ಎಂಬುವನು ಸೆಕ್ರೆಟರಿಎಟಿನಲ್ಲಿ ಕಾರಕೂನನಾಗಿದ್ದ. ಈ ಊರಲ್ಲಿ ಕೆಲದಿನಗಳಿದ್ದಾಗ ಹಲವು ಸಂಗತಿಗಳು ಅಲ್ಲಿ ಘಟಿಸಿದ್ದು ಗೊತ್ತಾದವು.

## ಯಶಸ್ವೀ ಸತ್ಯಾಗ್ರಹ

ಮಲಾಯಾದ ರಾಜಧಾನಿ ಕೋಲಾಲಂಪೂರಿನಲ್ಲಿ ಯುದ್ಧೋತ್ತರ ಪುನರ್ರಚನೆಗಾಗಿಬಂದ ೭ ನೇ ಇಂಡಿಯನ್ ಡಿವ್ಹಿಜನ್‌ದ ಒಂದು ವರ್ಕಶಾಪ ಕಂಪನಿಯಿದ್ದಿತು. ಅದರ ಹೆಸರು " 560 Indian infantry workshop company " ಎಂದು. ಈ ವರ್ಕಶಾಪಗಳಲ್ಲಿ ದುಡಿಯುವವರೆಲ್ಲರೂ ಸೈನಿಕರೇ. ಆದರೆ ಅವರು ಕೆಲವೊಂದು ತಾಂತ್ರಿಕ ವಿದ್ಯೆಗಳಲ್ಲಿ ತರಬೇತಿ ಹೊಂದಿದವರಿರುತ್ತಾರೆ. ಈ ವರ್ಕಶಾಪ ಕೋಲಾಲಂಪೂರಿನಿಂದ ಸುಮಾರು ೨—೨॥ ಮೈಲು ದೂರ ಊರಹೊರಗೆ ಇದ್ದಿತು. ಮಲಾಯಾದ ಕಮಾಂಡರ ಇನ್ ಚೀಫರವರ ಆಫೀಸೂ ಕೋಲಾಲಂಪೂರ ಸೆಕ್ರೆಟರಿಯೇಟ ಬಿಲ್ಡಿಂಗದಲ್ಲಿ ಇದ್ದಿತು. ಅದೇ ಯುದ್ಧ ಮುಗಿದುದರಿಂದ ಮಲಾಯದಲ್ಲಿ ಇನ್ನೂ ಸಿವ್ಹಿಲ್ ಸರಕಾರ ಅಸ್ತಿತ್ವದಲ್ಲಿ ಬಂದಿರಲಿಲ್ಲ. ದೇಶದ ತುಂಬೆಲ್ಲ ಸೈನಿಕರ ಆಳಿಕೆಯೇ ಇದ್ದಿತು. ಜನರಲ್ ಮ್ಯಾಕ್ಸರಾಯರು ಮಲಾಯಾದ ಮುಖ್ಯ ಸೇನಾಪತಿ ಇದ್ದರು ( ಇವರೇ ಮುಂದೆ ಪಾಕಿಸ್ತಾನದ ಮುಖ್ಯ ಸೇನಾಪತಿ ಆದರು ) ಮತ್ತು ಮೇಜರ ಜನರಲ್ ಚೌಧರಿಯವರು, ಕ್ವಾರ್ಟರ ಮಾಸ್ಟರ ಜನರಲರಾಗಿದ್ದರು. ೫೬೦ ಇನಫಂಟ್ರಿ ವರ್ಕಶಾಪಿನಲ್ಲಿ ಬಹಳಷ್ಟು ಸೈನಿಕರು ದುಡಿಯುತ್ತಿದರು. ಅದರಲ್ಲಿ ೩೫-೪೦ ಬಿಳಿಯರು, ಉಳಿದವರೆಲ್ಲರೂ ಭಾರತೀಯ ಸೈನಿಕರೇ ಇದ್ದರು. ಒಂದು ಸಲ ವರ್ಕಶಾಪಿನಲ್ಲಿಯ ಒಂದು ಕೋಣೆಯೊಳಗಿಂದ

೨ ವಾಚುಗಳು ಕಳವಾದವು. ಆಫೀಸರ ಕಮಾಂಡಿಂಗ ಇದರಿಂದ ಸಿಟ್ಟಾಗಿ ಎಲ್ಲ ಭಾರತೀಯ ಸೈನಿಕರಿಗೆ ಸಾಮೂಹಿಕ ಶಿಕ್ಷೆಯನ್ನಿತ್ತರು C. L. ಅಂದರೆ Confined to Lines. ಯಾವ ಸೈನಿಕನೂ ೧೫ ದಿನಗಳವರೆಗೂ ತಮ್ಮ ಠಾಣ್ಯ ಬಿಟ್ಟು ಕದಲುವಂತಿಲ್ಲ. ಆದರೆ ಈ ಪ್ರತಿಬಂಧ ಇಂಗ್ಲೀಷ ಸೈನಿಕರಿಗೆ ಇರಲಿಲ್ಲ. ಆ ಕೋಣೆಯಲ್ಲಿ ಕೆಲವು ಇಂಗ್ಲಿಷ ಸೈನಿಕರು ಕೆಲಸ ಮಾಡುತ್ತಿದ್ದರು. ಕೇವಲ ಭಾರತೀಯ ಸೈನಿಕರ ಮೇಲೆಯೇ ಸಂದೇಹವಿದೆ ಎಂದು ಈ ಶಿಕ್ಷೆಯಿಂದ ವ್ಯಕ್ತವಾಗುತ್ತಿತ್ತು. ಇದರಿಂದಾಗಿ ಭಾರತೀಯ ಸೈನಿಕರಲ್ಲಿ ಅಸಂತೋಷ ವ್ಯಾಪಿಸತೊಡಗಿತು. ಮೇಲಾಗಿ ಮಲಯಾದಲ್ಲಿಯೂ ನೇತಾಜಿ ಸುಭಾಸರ ಸಾಹಸಕಾರ್ಯದ ಕತೆಗಳನ್ನು ಕೇಳಿ ಕೇಳಿ ಈ ಭಾರತೀಯ ಸೈನಿಕರಲ್ಲಿಯೂ ಒಂದು ಹೊಸಜಾಗ್ರತಿ ಮೂಡಿತ್ತು. ಮೂರು ದಿನಗಳ ವರೆಗೂ ಶಿಕ್ಷೆಯನ್ನನುಭೋಗಿಸಿ ಮೂರನೇ ದಿನ ರಾತ್ರಿ ಒಂದು ತಂಬೂವಿನಿಂದ ಇನ್ನೊಂದು ತಂಬೂವಿಗೆ ಗೌಪ್ಯ ಸಂದೇಶ ಸಂಚರಿಸಿತು.

ಮರುದಿನ ಮುಂಜಾನೆ ಪರೇಡ ಗ್ರೌಂಡಿನಲ್ಲಿ ನಿತ್ಯದಂತೆ ಪರೇಡಿಗಾಗಿ ಇಡೀ ಪ್ಲಾಟೂನು ಬಂದು ನಿಂತಿತು. ಹವಾಲ್ದಾರ್ ಮೇಜರ್ ಪರೇಡಿಗಾಗಿ ಆಜ್ಞೆಯನ್ನು ಕೊಟ್ಟ. ಎಲ್ಲರೂ ನಿಂತ ಸ್ಥಳದಲ್ಲಿಯೇ ಕುಳಿತುಬಿಟ್ಟರು. ಹವಾಲ್ದಾರ ಮೇಜರ ದಂಗುಬಡೆದು ಆಫೀಸರ ಕಮಾಂಡರವರಿಗೆ ಈ ಸುದ್ಧಿಯನ್ನು ಮುಟ್ಟಿಸಿದ. ಆತ ಸಾಮ ಧಾನ ಭೇದ ದಂಡಗಳ ಬಗೆಬಗೆಯ ಉಪಾಯುಗಳನ್ನು ಹೂಡಿದ. ಆದರೆ ಈ ಪಡೆ ಮುಂಜಾನೆ ೭॥ ಘಂಟೆಗೆ ಕುಳಿತದ್ದು ಸಂಜೆ ೭ ಘಂಟೆಯಾದರೂ ಕದಲಲಿಲ್ಲ. ಚಹವಿಲ್ಲ—ಊಟವಿಲ್ಲ—ಬಿದ್ದ ಮಳೆಯನ್ನೂ ಸಹಿಸಿತು. ಹಾಗೆಯೇ ಶಾಂತ ಸತ್ಯಾಗ್ರವು ನಡೆಯಿತು. ಊರಲ್ಲಿಯೇ ಇರುವ ಮುಖ್ಯ ಸೇನಾಪತಿಗೆ ಸುದ್ದಿ ಮುಟ್ಟಿದರೆ ತನ್ನ ಕಾರ್ಯಕ್ಷಮತೆಗೆ ಕುಂದು ಎಂದು ಬಗೆದು ಆಫೀಸರ ಕಮಾಂಡಿಂಗ ಮೆತ್ತಗಾಗಿ ಬಂದು "I am ready to hear your grievances" ಎಂದನು.

ಅವನು ಹೀಗಂದದ್ದೇ ತಡ ಎಲ್ಲರೂ "ಜಯಹಿಂದ" ಎಂದು ಕೂಗಿ—ತಮಗಾದ ಅವಮಾನವನ್ನು ವಿವರಿಸಿದರು. ಆಫೀಸರ ಆ ಶಿಕ್ಷೆಯನ್ನು ಹಿಂತೆಗೆದುಕೊಂಡಿರುವದಾಗಿ ಅಲ್ಲಿಯೇ ಸಾರಿದನು.

ಸತ್ಯಾಗ್ರಹ ಯಶಸ್ವಿಯಾಯಿತು. ಎಲ್ಲರೂ ರಾತ್ರಿಯ ಊಟವನ್ನು ಮಾಡಿದರು. ನಾನು ಆ ಕಾಲಕ್ಕೆ ಕೋಲಾಲಂಪೂರದಲ್ಲಿಯೇ ಇದ್ದೆನು. ಈ

ಪ್ಲಾಟೂನಿನಲ್ಲಿ ನನ್ನೊಬ್ಬ ಗೆಳೆಯ ಇದ್ದುದರಿಂದ ಮೇಲಿಂದಮೇಲೆ ಅಲ್ಲಿಗೆ ಹೋಗುತ್ತಿದ್ದೆ. ಈ ಪ್ಲಾಟೂನಿನ ಸತ್ಯಾಗ್ರಹದಲ್ಲಿ ಧಾರವಾಡದ ಕನ್ನಡ ತರುಣ ಶ್ರೀ. ಘುಮ್ಮವಾಡ ಎಂಬವರೂ ಇದ್ದರು. (ಅವರು ಈಗ ಗದಗು ಅಥವಾ ಮುಂಡರಗಿಯಲ್ಲಿ ವೆಟರ್ನರಿ ಡಿಪಾರ್ಟಮೆಂಟಿನಲ್ಲಿದ್ದಾರೆ ಎಂದು ಕೇಳಿದ್ದೇನೆ.)

## ಭಾರತ ಸ್ವತಂತ್ರವಾಯಿತು

ಇದು ಕೋಲಾಲಂಪೂರಿನಲ್ಲಿಯೇ ನಡೆದ ಘಟನೆ. R. I. A. S. C. (Royal Indian Army Supply Corpse) ದ ಒಂದು M. T. Company (Mechanical Transport Company) ಇದ್ದಿತು. ಆ ಕಂಪನಿಯಲ್ಲಿ ಸುಮಾರು ೪೦-೪೫ ಟ್ರಕ್ಕುಗಳಿದ್ದವು. ಈ ಕಂಪನಿಯ ಇನ್‌ಚಾರ್ಜ ಒಬ್ಬ ಸುಬೇದಾರ 'ಪವಾರ' ಎಂಬುವವರಿದ್ದರು. ಅವರು ಮೂಲ ಸಾತಾರೆಯವರಿದ್ದು— ಮಿಲ್ಟ್ರಿ ಸೇರಿ ೨೦ ವರುಷಗಳಾಗಿದ್ದವು. ನಾವಿಬ್ಬರೂ ಒಂದೇ ಹಡಗದೊಳಗಿಂದ ಮಲಾಯಾಕ್ಕೆ ಹೋಗಿದ್ದೆವು. ಮದ್ರಾಸ ದಲ್ಲಿಯೇ ನಮ್ಮಿಬ್ಬರ ಪರಿಚಯವಾಗಿತ್ತು ಮಲಾಯಾದಲ್ಲಿ ಬಂದಿಳಿದನಂತರ ನಾವಿಬ್ಬರೂ ಬೇರೆ ಬೇರೆ ಪ್ಲಾಟೂನಿಗೆ ಬೇರೆ ಬೇರೆ ಊರುಗಳಿಗೆ ಹೋದೆವು. ನಾನು ಒಂದು ಸಲ ಆಕಸ್ಮಾತ್ತಾಗಿ ಕ್ವೆಂಟನದಿಂದ ಕೋಲಾಲಂಪೂರಿಗೆ ಹೋಗಿದ್ದೆ. ಆಗ ಅವರು ಅಲ್ಲಿಯೇ ಇದ್ದಾರೆಂದು ಭೆಟ್ಟಿಯಾಗಲು ಹೋಗಿದ್ದೆ. ಆದರೆ ಆಶ್ಚರ್ಯವೆಂದರೆ ಸುಭೇದಾರ ಪವಾರರನ್ನು ನಜರ-ಕೈದಿನಲ್ಲಿರಿಸಲಾಗಿತ್ತು. ಅವರ ಕೈ ಕೆಳಗಿನ ಹವಾಲ್ದಾರರನ್ನು ಪ್ರತ್ಯೇಕವಾಗಿ ಭೇಟಿಯಾಗಿ ಈ ಓಪನ್ ಅರೆಸ್ಟದ ಕಾರಣಗಳನ್ನು ಕೇಳಿದೆ. ಆತ ವಿವರಿಸಿದ ಸಂಗತಿಯಿಂದ ಸಖೇದಾ-ಶ್ಚರ್ಯವಾಯಿತು. ಒಂದು ರೀತಿಯಲ್ಲಿ ಹೆಮ್ಮೆಯೂ ಎನಿಸಿತು. ಊರಲ್ಲಿ ನೇತಾಜಿಯವರ ಸಾಹಸ ಪ್ರಸಂಗಗಳನ್ನು ಕೇಳಿ ಆತನಲ್ಲಿ ಒಂದು ಬಗೆಯ ಜಾಗ್ರತಿಯಾಗಿತ್ತು. ಭಾರತದಲ್ಲಿ ಅಧಿಕಾರ ಹಸ್ತಾಂತರದ ಬಗೆಗೆ ಬಗೆಬಗೆಯ ಸುದ್ದಿಗಳು ಅಲ್ಲಿಯ ಪತ್ರಿಕೆಗಳಲ್ಲಿ ಅಚ್ಚಾಗುತ್ತಿದ್ದವು. ಅಚ್ಚಾದ ವಿವರಗಳನ್ನೂ ಓದುವಷ್ಟು ಪವಾರ ಬುದ್ಧಿವಂತನಾಗಿರಲಿಲ್ಲ. ಆತನಿಗೆ ಇಂಗ್ಲೀಷ ಬರುತ್ತಿರ ಲಿಲ್ಲ. ಸುತ್ತುಮುತ್ತಲಿನ ಪರಿವಾರದ ಜನರ ಮಾತು, ರಾಜಕಾರಣದ ಬದ ಲಾವಣೆ, ಇತ್ಯಾದಿಯಿಂದ ಆತನು ಭಾರತ ಸ್ವತಂತ್ರವಾಯಿತು ಎಂದೇ ತಿಳಿದು ಕೊಂಡು, ಒಂದುದಿನ ೧೫-೨೦ ಕಾಂಗ್ರೆಸ್ ಧ್ವಜಗಳನ್ನು ತರಿಸಿ ಅವುಗಳನ್ನು

ಮೋಟಾರುಗಳ ಮೇಲೇರಿಸಿ ಹಾರಿಸುತ್ತ ಮೆರವಣಿಗೆಯನ್ನು ತೆಗೆದನು. ಈ ಮೋಟಾರು ಮೆರವಣಿಗೆ ಇನ್ನೂ ಊರನ್ನು ಪ್ರವೇಶಿಸಿರಲಿಲ್ಲ. ಅಷ್ಟಕ್ಕೆ ಸುದ್ದಿ ಹತ್ತಿ ಅದನ್ನು ಹಿಂದಿರುಗಿಸಲಾಯಿತು. ಮತ್ತು ಸುಭೇದಾರ ಪವಾರರನ್ನು ಸೆರೆ ಹಿಡಿಯಲಾಯಿತು. ಈ ಸಂಗತಿಯನ್ನು ಕೇಳಿಕೊಂಡು ನಾನು ಪವಾರರನ್ನು ಭೇಟಿಯಾಗಲು ಪರವಾನಿಗೆಯನ್ನು ಪಡೆದುಕೊಂಡು ಅವರ ಖೋಲಿಯನ್ನು ಪ್ರವೇಶಿಸಿದೆ.

ಪವಾರ ಮಂಚದ ಮೇಲೆ ಮಲಗಿದ್ದರು. ನಾನು ಒಳಗೆ ಬಂದುದನ್ನು ನೋಡಿ ಎದ್ದು ಕುಳಿತು ಶಾಂತರೀತಿಯಿಂದ ಹಟ ಹೊಡೆದರು. ಬೀರನ್ನು ಕುಡಿದ ನಂತರ ಪವಾರ ನನ್ನನ್ನು ಕೇಳಿದರು. “ ಅಜೂನ ಹಿಂದುಸ್ಥಾನ ಸ್ವತಂತ್ರ ಝಾಲಾ ನಾಹಿ ಕಾಹೋ ? ” ನಾನು ಅವರನ್ನು ಸಮಾಧಾನಗೊಳಿಸಿ “ ಸ್ವಲ್ಪೆ ದಿನದಲ್ಲಿ ಭಾರತ ಸ್ವತಂತ್ರವಾಗುವದೆಂದು ” ಹೇಳಿದೆ.

೧೬

## ಕ್ವಂಟನ್ ವಾಸ

ಮಲಾಯಾದ ಅತಿ ದೊಡ್ಡ ಸಂಸ್ಥಾನವೆಂದರೆ ಪಹಾಂಗ. ಪಹಾಂಗ ಸಂಸ್ಥಾನದ ರಾಜಧಾನಿಯೇ ಕ್ವಂಟನ್. ಪೂರ್ವ ಕರಾವಳಿಯ ಮೇಲಿದ್ದ ಪಟ್ಟಣ. 'ಕ್ವಂಟನ್' ಊರು ಸಣ್ಣದಾಗಿದ್ದರೂ ಸುಂದರವಾದುದು ಮೂರು ಬದಿಗೆ ಹೊಳೆ, ಪೂರ್ವಕ್ಕೆ ಚೀನಾ ಸಮುದ್ರ. ಹೀಗಾಗಿ ಮಳೆಗಾಲದಲ್ಲಿ ಕ್ವಂಟನ್ ಒಂದು ನಡುಗಡ್ಡೆಯಾಗಿಬಿಡುತ್ತಿತ್ತು. ಹೊಳೆಗೆ ಸೇತುವೆ ಇರಲಿಲ್ಲ. ಸೇತುವೆಯನ್ನು ಕಟ್ಟುವದೂ ಸ್ವಲ್ಪ ಕಠಿಣವಾದ ಕೆಲಸವೇ ಆಗಿತ್ತು.

ಮೈಲು ಮೈಲಗಲದ ಹೊಳೆ; ಎರಡೂ ಬದಿಗೆ ದಟ್ಟಡವಿ. ದಂಡೆಗಿದ್ದ ಉತ್ತುಂಗ ವೃಕ್ಷಗಳ ದಟ್ಟವಾದ ಛಾಯೆಯು ಹೊಳೆಯ ನೀರಮೇಲೆ ಪಸರಿಸಿದಾಗ, ಆ ಹೊಳೆಯನ್ನು ಬರೀ ನೋಡುವದಕ್ಕೂ ಧೈರ್ಯ ಬೇಕೆಂದೆನಿಸುತ್ತಿತ್ತು. ಅಷ್ಟು ಭಯಾನಕ ಭೀಕರವಾಗಿ ಹರಿಯುತ್ತಿತ್ತು. ರಹದಾರಿಯೂ ಅಷ್ಟಕ್ಕಷ್ಟೇ ಇದ್ದುದರಿಂದ, ಸರಕಾರವು ಸೇತುವೆ ಕಟ್ಟುವ ಗೋಜಿಗೆ ಹೋಗಲಿಲ್ಲ. ಕ್ವಂಟನ್ ಪಹಾಂಗದ ರಾಜಧಾನಿಯಾಗಿದ್ದರೂ, ಸಂಸ್ಥಾನದ ಸುಲ್ತಾನ ವಾಸಿಸುವದು ಪೇಕನದಲ್ಲಿಯೇ. ಉಳಿದೆಲ್ಲ ಸರಕಾರೀ ಕಚೇರಿಗಳು ಕ್ವಂಟನದಲ್ಲಿದ್ದುದರಿಂದ, ಕ್ವಂಟನಕ್ಕೆ ಪೇಕನಕ್ಕಿಂತಲೂ ಹೆಚ್ಚಿನ ಸ್ಥಾನಮಾನ ದೊರೆತಿತ್ತು.

ನಮ್ಮ ವರ್ಕಶಾಪ್ ಕಂಪನಿ ಬೀಡು ಬಿಟ್ಟುದು ಊರ ಹೊರಗೆ. ಊರ ಹೊರಗಾದರೂ ಊರಿಂದ ದೂರವಾಗಿರಲಿಲ್ಲ. ಕ್ವಂಟನ್ ಹೊಳೆ (ಹೊಳೆಯ ಹೆಸರೇ ಅದು) ಸಮುದ್ರಕ್ಕೆ ಕೂಡಿದ ದಂಡೆಯಲ್ಲಿಯೇ ನಮ್ಮ ಯುನಿಟ್ ಬೀಡು ಬಿಟ್ಟಿತ್ತು. ಅಲ್ಲಿಯೇ ಬೀಡು ಬಿಡುವದಕ್ಕೆ ವಿಶೇಷ ಕಾರಣವಿತ್ತು. ಯುದ್ಧದ ಸಮಯದಲ್ಲಿ ಜಪಾನೀ ಜನರು ಅದೇ ಸ್ಥಳದಲ್ಲಿ ಹಡಗು ಕಟ್ಟುವ ಕಾರಖಾನೆಯನ್ನು ಕಟ್ಟಿಸಿದ್ದರು. ಕಟ್ಟಿಸಿದ ಸ್ಥಳ, ಇದ್ದ ಸ್ಥಿತಿಯಲ್ಲಿ ನಮ್ಮ ವಶಕ್ಕೆ ಬಂದುದರಿಂದ ಅದೇ ಸರಿಯಾದ ಸ್ಥಳವೆನಿಸಿ, ನಮ್ಮ ಯುನಿಟ್ ಅಲ್ಲಿ

ಪಾಳೆಯ ಹಾಕಿತು. ಹಗಲಿರುಳೂ ಭೋರ್ಗರೆಯುವ ಸಾಗರದ ಸಪ್ಪಳಕ್ಕೆ ಮೊದಲೊಂದುದಿನ ಬೇಜಾರಗೊಂಡೆವು. ಮುಂದೆ ಅಭ್ಯಾಸವಾಯಿತು.

ಕ್ವಂಟನ್ ಪಟ್ಟಣದ ಪೂರ್ವೇತಿಹಾಸ ಬಹು ಮೋಜಿನದಾಗಿದೆ. ಆ ಕೆಲಸ ಇತಿಹಾಸಕಾರರದು. ಆದರೂ ಈ ಊರಿಗೆ ಮೊದಲು "ಇಂದ್ರಪುರಿ" ಎಂಬ ಹೆಸರಿತ್ತು. ಎನ್‌ಸೈಕ್ಲೋಪಿಡಿಯಾ ಬ್ರಿಟಾನಿಕಾ (Encyclopedea Britanica) ದಲ್ಲಿ ಈ ರೀತಿ ನಮೂದಿಸಲಾಗಿದೆ.

೧೨

## ಒಂದು ಸ್ವಾರಸ್ಯ ಪ್ರಸಂಗ

ನಮ್ಮ ಶಿಪ್ ಯಾರ್ಡಿನ ಹತ್ತಿರವೇ ೮-೧೦ ಮನೆಗಳಿದ್ದವು. ಆದರಲ್ಲಿ ಒಂದು ಕುಟುಂಬದ ಪರಿಚಯು ನನಗಿದ್ದಿತು. ಆ ಮನೆತನದ ಹೆಸರು 'ನ್ಯಾನ್‌ಗೂ' ಎಂದು. ಮನೆತನದ ಮುಖ್ಯಸ್ತ ಸತ್ತುಹೋಗಿದ್ದ. ವಿಧವೆ ತಾಯಿ ಮೂರು ಹೆಣ್ಣುಮಕ್ಕಳಷ್ಟೇ ಇದ್ದರು. ತಾಯಿ, ಜೀವನ ನಿರ್ವಹಣ ಸಲುವಾಗಿ ಒಂದು ಟೇಲರಿಂಗ ಮಶಿನ್‌ನ್ನು ಇರಿಸಿಕೊಂಡು ದುಡಿಯುತ್ತಿದ್ದಳು. ಅವಳ ಮೂವರು ಹೆಣ್ಣುಮಕ್ಕಳಲ್ಲಿ ಹಿರಿಯುವಳು ಸುಮಾರು ೨೫-೨೬ ವರುಷದವಳಿರ ಬೇಕು. ಅವಳ ಹೆಸರನ್ನು ಕತೆಯ ಮಟ್ಟಿಗೆ ಬೇರೆಯಾಗಿ ಹೇಳುತ್ತೇನೆ. ಮೊದಲನೆಯವಳು ಕ್ಯಾಥರೀನ್, ಎರಡನೇಯವಳ ಹೆಸರು ಟ್ರೀಜಾ, ಮೂರನೆಯವಳು ವಿಲಿ ಎಂದು. ಹಿರಿಯುವಳೂ ಮನೆಯಲ್ಲಿಯೇ ಹೊಲಿಗೆಯ ಕೆಲಸವನ್ನು ಮಾಡುತ್ತಿದ್ದಳು. ಅವಳ ತಂಗಿಯರಿಬ್ಬರೂ ಕಾನ್ವೆಂಟ ಸ್ಕೂಲಿಗೆ ಹೋಗುತ್ತಿದ್ದರು. ಅವರ ಮನೆ ನಮ್ಮ ಯುನಿಟ್ಟಿನಿಂದ ತೀರ ದೂರವಾಗಿರಲಿಲ್ಲವಾದುದರಿಂದ ನಾನು ಮೇಲಿಂದಮೇಲೆ ಅಲ್ಲಿಗೆ ಹೋಗಿ ಬಂದು ಮಾಡುತ್ತಿದೆ. ಈ ಪ್ರಕಾರ ನನ್ನ ಪರಿಚಯು ಬೆಳೆದು ಬಂದಿತ್ತು. ದಿನವೂ ಸಂಜೆ ಒಂದು ತಾಸು ಹರಟೆ ಹೊಡೆದು ಬರುತ್ತಿದೆ. ಒಂದೆರಡು ಸಲ ಊಟಕ್ಕೂ ಅವರಲ್ಲಿ ಹೋಗಿದ್ದೆ. ಈ ಪರಿಚಯು ಮೇಲಿನವೆರಡು ಕಾರ್ಯಕ್ರಮಗಳ ಹೊರತು ಮತ್ತಿನ್ನಾವದೇ ಕೆಲಸಗಳಿಗೆ ಆಸ್ಪದ ಕೊಡದಂತೆ ಎಚ್ಚರ ವಹಿಸಿದ್ದೆ. ಒಂದು ದಿನ ನಾನು ಕ್ವಂಟನದಲ್ಲಿಯ ಸನ್ ಸಿನೀಮಾ ಥೇಟರಿಗೆ ಇಂಗ್ಲಿಷ ಫಿಲ್ಮನ್ನು ನೋಡಲು ಹೋಗಿದ್ದೆ. ಸೆಕೆಂಡ ಕ್ಲಾಸಿನಲ್ಲಿ ಅಂದು ಎಳ್ಳಷ್ಟೂ ಗದ್ದಲವಿರಲಿಲ್ಲ. ಸಿನೀಮಾ ಪ್ರಾರಂಭವಾಗಲು ಇನ್ನೂ ಕೆಲವು ನಿಮಿಷಗಳಿದ್ದವು. ಅಷ್ಟರಲ್ಲಿ–ಕ್ಯಾಥರೀನಳೂ ಅಲ್ಲಿಗೆ ಬಂದಳು. ನನ್ನನ್ನು ನೋಡಿದಾಕ್ಷಣ ಅವಳೂ ನನ್ನ ಬದಿಯಲ್ಲಿಯೇ ಕುಳಿತುಕೊಂಡಳು. ಸಹಜೀಕವಾಗಿ ನಾವು ಹರಟೆಯನ್ನು ಪ್ರಾರಂಭಿಸಿದೆವು. ಸಿನೀಮಾ ಪ್ರಾರಂಭವಾಗಲು ಇನ್ನೂ ತಡವಿದ್ದಿತು. ವೇಳೆ ಕಳೆಯುವದಾದರೂ ಹೇಗೆ. ನಾನು ಥಿಯೇಟರಿನಲ್ಲಿ ಓಡಾಡುತ್ತಿದ್ದ ಹಾಟೇಲ ವೆಟ್ರೆಸ್‌ಳಿಗೆ ಎರಡು ಕಪ್ ಚಹ

ತರಲು ಆಜ್ಞಾಪಿಸಿದೆ. ಕೆಲ ಸಮಯದಲ್ಲಿ ಚಹಪ್ರೂ ಬಂದಿತು. ನಾವಿಬ್ಬರೂ ಚಹ ಕುಡಿದು ಮತ್ತೆ ಹರಟಿಗೆ ಪ್ರಾರಂಭಿಸಿದೆವು. ಈ ವೇಳೆಗಾಗಲೇ ಥರ್ಡ ಕ್ಲಾಸಿನಲ್ಲಿ ಕ್ವಂಟನದಲ್ಲಿಯ 'ಕಿರಾಣಿ ಅಂಗಡಿಯನ್ನಿಟ್ಟುಕೊಂಡ ವೇಲಾಯುಧನ್ ಎಂಬ ತಮಿಳು ತರುಣ ಬಂದು ಕುಳಿತುಕೊಂಡಿದ್ದ - ನಾನು ಮತ್ತೂ ಕ್ಯಾಥರೀನ ಅದಿಬದಿಯಲ್ಲಿಯೇ ಕುಳಿತು ಹರಟೆ ಕೊಚ್ಚುತ್ತ ಚಹ ಕುಡಿದದ್ದನ್ನು ಕಂಡಿದ್ದ. ಆದರೆ ನಮ್ಮಿಬ್ಬರ ಗಮನ ಅವನತ್ತ ಹೋಗಲಿಲ್ಲ. ಅದಕ್ಕೆ ಕಾರಣ ವೆಂದರೆ ಆತ ಕುಳಿತುಕೊಂಡ ಸ್ಥಳದಲ್ಲಿ ತುಂಬುಗದ್ದಲವಿದ್ದಿತು. ನಾವು ಕುಳಿತ ಸ್ಥಳದಲ್ಲಿ ಸುಮಾರು ೬-೮ ಜನರು ಇದ್ದೆವು. ನಾನು ಮೊದಲು ಒಬ್ಬಂಟಿಗ ನಾಗಿ ಥಿಯೇಟರಿನಲ್ಲಿ ಬಂದು ಕುಳಿತುಕೊಂಡದ್ದನ್ನು ವೇಲಾಯುಧನ್‌ನು ನೋಡಿದ್ದರೆ ಆತ ತಪ್ಪು ತಿಳಿದುಕೊಳ್ಳುತ್ತಿರಲಿಲ್ಲ. ಆದರೆ ಕ್ಯಾಥರೀನ ಬಂದು ನನ್ನ ಬದಿಯಲ್ಲಿ ಕುಳಿತುಕೊಂಡ ನಂತರ, ಆ ವೇಲಾಯುಧನ್ ಥಿಯೇಟರಿನ ಒಳಗೆ ಬಂದು ಕುಳಿತುಕೊಂಡಿದ್ದ.

ವೇಲಾಯುಧನ ಮಾರ್ಕೆಟ ರೋಡಿನಲ್ಲಿಯೇ ಚಿಕ್ಕ ಅಂಗಡಿಯನ್ನು ಇರಿಸಿಕೊಂಡಿದ್ದರಿಂದ ನಾನು ಅವನ ಕಡೆಗೆ ೫-೬ ಸಲ ಹೋಗಿದ್ದೆ. ಅಷ್ಟರಲ್ಲಿಯೇ ನಮಿಬ್ಬರಲ್ಲಿ ತುಂಬಾ ಪರಿಚಯ ಬೆಳೆದು ಬಂದಿತ್ತು. ವೇಲಾಯುಧನ್ ನನ್ನ ಪರಿಚಿತ ಗೆಳೆಯ ಎಂಬ ಸಂಗತಿ ಕ್ಯಾಥರೀನಳಿಗೆ ತಿಳಿಯದು. ಹಾಗೆಯೇ ನನ್ನ ಪರಿಚಯ ಕ್ಯಾಥರೀನ್‌ಳಿಗೆ ಇದೆ ಎಂದು ವೇಲಾಯುಧನನಿಗೆ ಗೊತ್ತಿರಲಿಲ್ಲ. ಆದರೆ ವೇಲಾಯುಧನ್ ನಮ್ಮಿಬ್ಬರನ್ನು ಒಂದೆಡೆಯಲ್ಲಿಯೇ ನೋಡಿದುದರಿಂದ ಆತ ನಮ್ಮಿಬ್ಬರನ್ನು ತಪ್ಪು ತಿಳಿದುಕೊಂಡುಬಿಟ್ಟ.

ಸಿನೀಮಾ ಬಿಟ್ಟಮೇಲೆ ನಾನು ಮತ್ತು ಕ್ಯಾಥರೀನ ಇಬ್ಬರೂ ಥಿಯೇಟರಿನಿಂದ ಹೊರಬಿದ್ದು, ಮತ್ತೆ ಚಹ ಕುಡಿದು ನಡೆದೆವು. ಕ್ಯಾಥರೀನಳ ಮನೆಯ ಮೇಲಿಂದಲೇ ನಾನೂ ಹೋಗಬೇಕಿತ್ತು. ಹೀಗಾಗಿ ಕ್ಯಾಥರೀನ ನಾನೂ ಕೂಡಿಯೇ ಮನೆಯತ್ತ ಹೊರಟೆವು. ಅವಳ ಮನೆ ಇದ್ದುದು ವಾಲ್‌ಸ್ಟ್ರೀಟನಲ್ಲಿ. ಅವಳನ್ನು ಅವಳ ಮನೆಯಹತ್ತರ ಬಿಟ್ಟು ನಾನು ನನ್ನ ವಾಸಸ್ಥಳಕೆ ಬಂದು ಮಲಗಿಕೊಂಡೆನು.

ಮರುದಿನ ಸಂಜೆ ಪೇಟೆಯಲ್ಲಿ ಅಡ್ಡಾಡುತ್ತಿರುವಾಗ ವೇಲಾಯುಧನ್ ನನ್ನ ಹೆಸರನ್ನು ಕೂಗಿಕೊಂಡು ಕರೆದನು. ಅಂತೂ ಒಬ್ಬನು ಹರಟಗೆ ಸಿಕ್ಕನಲ್ಲ ಎಂದು ನಾನು ಅವನ ಅಂಗಡಿಯನ್ನು ಪ್ರವೇಶಿಸಿದೆ. ಅಂಗಡಿಯಲ್ಲಿ

ಚಸ್ತೊಂದು ಗದ್ದಲವಿರಲಿಲ್ಲ. ವೇಲಾಯುಧನ್ ಕುಶಲೋಪರಿ ಮಾತು ಗಳನ್ನಾಡಿ— ಮುಖ್ಯ ವಿಷಯದತ್ತ ಹೊರಳಲು ತಡಬಡಿಸತೊಡಗಿದ. ನನಗೆ ಮೊದಮೊದಲು ಒಂದೂ ಅರ್ಥವಾಗಲಿಲ್ಲ. ಆತ ಕೇಳತೊಡಗಿದ—

"ನಿನ್ನೆ ಸಿನೀಮಾಕ್ಕೆ ಹೋಗಿದ್ದಿರೇನು ?"

"ಹೌದು."

"ಪಿಕ್ಚರ ಸಾಧಾರಣ ಇತ್ತು."

"ಅಡ್ಡಿ ಇಲ್ಲಾ, ಒಮ್ಮೆ ನೋಡಲಿಕ್ಕೆ"

"ಬದಿಗೆ ಒಬ್ಬರನ್ನು ಕೂಡಿಸಿಕೊಂಡು ನೋಡಿದರ ಪಿಕ್ಚರ ಛಲೋ ಅನಸತದ."

"ಹಾಂಗಿದ್ದರ ಬದಿಗೆ ಕೂಡೋವಂಥವರನ್ನು ಕರಕೊಂಡು ಹೊಗಬೇಕು."

"ಎಲ್ಲರಿಗೆ ಆ ನಸೀಬು ಎಲ್ಲಿಂದ ಬರಬೇಕು ?"

"ಯಾಕ ಲಗ್ನ ಆಗಿಲ್ಲೇನು ನಿಮ್ದು ?"

"ಲಗ್ನ ಆಗಿತ್ತು ಈಗ ವಿದುರ ನಾನು"

"ಮತ್ತೆ ಮಾಡಿಕೊಳ್ಳಿರಲ್ಲ, ಇನ್ನೂ ಚಿಕ್ಕವರಿದ್ದೀರಿ.

"ಲಗ್ನ ಆದರ ಮಾತ್ರ ಬದಿಗೆ ಕೂಡೋವರು ಬರತಾರ ಅಂತೇನೂ ಇಲ್ಲ"

ಇಲ್ಲಿಯವರೆಗೂ ನನಗೆ ಅವನ ಮಾತಿನ ಮರ್ಮದ ಅರ್ಥವೇ ಆಗಲಿಲ್ಲ. ಆತನಿಗೂ ಅನಿಸಿರಬೇಕು, ಈ ವ್ಯಕ್ತಿಗೆ ಸೂಕ್ಷ್ಮವಾಗಿ ಹೊಡೆದ ಮಾತಿನ ಅರ್ಥ ವಾಗುವದಿಲ್ಲವೆಂದು. ಆತ ನೇರವಾಗಿ ಮಾತನಾಡಲೂ ಅಂಜುತ್ತಿದ್ದಾನೆ ಎಂಬುದು ತದನಂತರ ತಿಳಿಯಿತು. ನನ್ನ ಆಕಾರ ಬಟ್ಟೆ ಬರೆಗಳನ್ನು ಕಂಡೇ ಅಂಜಿರಬೇಕು. ಅಂತೂ ಕೊನೆಗೊಮ್ಮೆ ಅಂಜಂಜುತ್ತ ತಡವರಿಸುತ್ತ ಕೇಳಿದ.

"ಒಂದು ಮಾತು ಕೇಳ್ತೀನರಿ - ಸಿಟ್ಟಾಗಬಾರದು. ಮತ್ತ ಸಿಟ್ಟ ಆಗ ತಿದ್ದರ ಕೇಳೂದ ಇಲ್ಲರಿ"

"Be frank ಏನು ಬೇಖಾದ್ದನ್ನು ಕೇಳಿರಿ. ನಾನು ಸಿಟ್ಟಾಗುವದಿಲ್ಲ"

"ನಿನ್ನೆ ಕ್ಯಾಥರೀನ ನ್ಯಾನ್‌ಗೂನ್ನ ಸಿನೀಮಾಕ್ಕ ಕರಕೊಂಡು ಬಂದಿದ್ದಿರಿ. ಮತ್ತೇನಾದರೂ ವಿಷೇಷ ಅದs ಎನು ?"

"ಈ ವಿಷಯದಲ್ಲಿ ನಿನಗೇಕೆ ಆಸ್ತೆ ?"

"ನೀವು ಮೊದಲಿಗೆ ಹೇಳೀರಿ ಸಿಟ್ಟಾಗುವದಿಲ್ಲವೆಂದು."

"ಹೌದು ಈಗಲೂ ಹೇಳುತ್ತೇನೆ. ಸಿಟ್ಟಾಗುವದಿಲ್ಲೆಂದು, ಈಗ ನಾನು ಕೇಳಿದ ಪ್ರಶ್ನೆ ಸಿಟ್ಟನಿಂದ ಕೇಳಿಲ್ಲ. ಸಂಬಂಧವಿಲ್ಲದ ವಿಷಯದತ್ತ ನಾವು ಗಮನ ಕೊಡದಿರುವದು ಒಳಿತಲ್ಲವೇ ?"

"ಸರಿಯಾಗಿ ಹೇಳಿದಿರಿ, ಸಂಬಂಧವಿಲ್ಲದ ವಿಷಯದತ್ತ ನಾವು ಗಮನ ಕೊಡುವದು ಒಳಿತಲ್ಲ. ಆದರೆ ಈ ವಿಷಯ ಸ್ವಲ್ಪ ಮಟ್ಟಿಗೆ ನನಗೆ ಸಂಬಂಧಿಸಿದೆ."

"ಅದೇನು ಸಮಾಚಾರ ? ಸಂಪೂರ್ಣವಾಗಿ ಬಿಚ್ಚಿ ಹೇಳಿಬಿಡು."

"ಕ್ಯಾಂಟನದಲ್ಲಿಯ ಭಾರತೀಯರನ್ನು ಬಲ್ಲಿರಿ. ಅವರು ತೀರ ಅಲ್ಪ ಸಂಖ್ಯಾಕರಾಗಿದ್ದಾರೆ. ಕೆಲವು ಭಾರತೀಯರು ಇಲ್ಲಿಯೇ ಮೂಲ ನಿವಾಸಿಗಳ ಜತೆಯಲ್ಲಿ ಮದುವೆಯಾಗಿದ್ದಾರೆ. ನನ್ನ ಅಣ್ಣ ನಿಮಗೆ ಗೊತ್ತಿರಬಹುದು. ಇಲ್ಲಿಯ ಜಪಾನೀ ಮಹಿಳೆಯನ್ನು ಮದುವೆಯಾಗಿ ಈಗ ಬೇರೆಯಾಗಿ ಜರಂಟಂಟಿನಲ್ಲಿದ್ದಾನೆ." ಆತ ನಮ್ಮಿಂದ ಈಗ ಬೇರೆಯಾಗಿರುವ. ನಮ್ಮ ತಂದೆ ಈ ಊರಿಗೆ ೩೫ ವರುಷಗಳ ಹಿಂದೆ ಬಂದು ಒಂದು ಚಿಕ್ಕ ತಕ್ಕಡಿಯ ಅಂಗಡಿಯನ್ನು ಹಾಕಿದರು. ನನಗೀಗ ೨೯-೩೦ ವರುಷ. ನಾನು ಹುಟ್ಟಿದ್ದುದು ಇದೇ ಊರಲ್ಲಿ. ಭಾರತವನ್ನು ನಾನೊಂದೂಸಲ ಸಂದರ್ಶಿಸಿಲ್ಲ. ಅದು ನಮ್ಮ ದೇಶವೆಂದು ಗೊತ್ತಿದೆ. ಆದರೆ ನಾನಂತೂ ನೋಡಿಲ್ಲ. ಅದರ ವಿಷಯಕ ಇತಿಹಾಸವೇನೋ ಅಲ್ಪ ಸ್ವಲ್ಪ ಗೊತ್ತಿದೆ. ಇಲ್ಲಿಯೇ ಹುಟ್ಟಿ ಬೆಳೆದುದರಿಂದ ನನಗೆ ಇಲ್ಲಿಯ ನೆಲದ ಪ್ರತಿಕಣದಲ್ಲಿ ಸಮರಸನಾಗಿರುವೆ. ನಾಳೆ ನೀವು ನನ್ನನ್ನು ಭಾರತಕ್ಕೆ ಕರೆದೊಯ್ಯಲು ಬಂದರೆ ನಾನು ಬರುವ ಇಚ್ಛೆಯನ್ನು ಪ್ರಕಟಿಸಲಾರೆ. ಈ ಊರಲ್ಲಿಯ ಪ್ರತಿ ಸಂಗತಿಯೂ ನನಗೆ ನಿಮಗಿಂತಲೂ ಹೆಚ್ಚಾಗಿ ಗೊತ್ತಿದೆ. ಈಗ ಆ ಕ್ಯಾಥರೀನಳ ವಿಷಯ ಹೇಳುವೆ. ಈ ಕ್ಯಾಥರೀನ ಮೂಲ ಮಲಾಯು ಮನೆತನ. ಇವಳ ತಂದೆಯೇ ಕ್ರೈಸ್ತ ಮತವನ್ನು ಸ್ವೀಕರಿಸಿದನು. ಈಗ ಎರಡು ವರುಷಗಳ ಹಿಂದೆಯೇ ಆತ ತೀರಿಹೋದ. ಮುಂದೆ ಒಂದು ವರುಷದಲ್ಲಿಯೇ ಕ್ಯಾಥರೀನಳ ಮದುವೆಯಾಯಿತು. ಅದು ಅವಳ ಪ್ರೇಮ ವಿವಾಹ. ಅವಳ ಗಂಡ ನನ್ನಂತೆ ಭಾರತೀಯನೇ ತಮಿಳು ಮನುಷ್ಯನಾಗಿದ್ದ. ಆಕೆಯ ಗಂಡ

ನನ್ನ ಮಿತ್ರನಾಗಿದ್ದ. ಮುಂದೆ ಸ್ವಲ್ಪ ದಿನಗಳಲ್ಲಿಯೇ ಯುದ್ಧ ಪ್ರಾರಂಭ ವಾಯಿತು.

ಇಲ್ಲಿಯ ಪರಿಸ್ಥಿತಿ ಮೊದಲೇ ಶೋಚನೀಯ. ಅದರಲ್ಲಂತೂ ಯುದ್ಧ ಪ್ರಾರಂಭವಾಯಿತು. ಕೇಳುವದೇನು ? ಯುದ್ಧ ಪ್ರಾರಂಭವಾದ ಕೆಲ ದಿನ ಗಳಲ್ಲಿಯೇ ಜಪಾನಿಗಳು ಈ ದೇಶವನ್ನು ಗೆದ್ದುಕೊಂಡರು. ಈ ಕ್ವಂಟಸ್ ಪಟ್ಟಣಕ್ಕೂ ಜಪಾನೀ ಮಿಲ್ಟ್ರೀ ಕಮೀಶನರ ಬಂದು ದಬ್ಬಾಳಿಕೆಯನ್ನು ಪ್ರಾರಂಭಿಸಿದ. ಇಲ್ಲಿ ಆಗ ಕೆಲವು ಜಪಾನೀ ಸೈನಿಕರು ಅತ್ಯಾಚಾರ ವೆಸಗಿದರು. ಆದರೆ ಭಾರತೀಯರ ಸುದ್ದಿಗೆ ಅವರು ಸಾಮಾನ್ಯವಾಗಿ ಬರು ತ್ತಿರಲಿಲ್ಲ. ಪ್ರತಿ ಆದಿತ್ಯವಾರ ಮುಂಜಾನೆ ಏಳು ಘಂಟೆಗೆ ಸಮುದ್ರದ ದಂಡೆ ಯಲ್ಲಿ ನಗರದ ಎಲ್ಲ ನಾಗರಿಕರು ಒಂದೆಡೆಗೆ ಕೂಡಿ ಪೂರ್ವಕ್ಕೆ ಮುಖ ಮಾಡಿ ಸೂರ್ಯದೇವರ ಪ್ರಾರ್ಥನೆ ಮಾಡಿ— ಜಪಾನದ ಅರಸನಿಗೆ ಶುಭ ಕೋರ ಬೇಕೆಂದು ಜಪಾನೀ ಅಧಿಕಾರಿಗಳು ಕಟ್ಟಪ್ಪಣೆಯನ್ನು ಹೊರಡಿಸಿದ್ದರು. ಅವರ ಈ ಸುಗ್ರೀವಾಜ್ಞೆಯನ್ನು ತಪ್ಪಿಸಲು ಯಾರಿಂದಲೂ ಸಾಧ್ಯವಾಗುತ್ತಿರಲಿಲ್ಲ. ಸುಗ್ರೀವಾಜ್ಞೆ ಜಾರಿಗೆ ಬಂದ ಮೊದಲನೇ ಪ್ರಾರ್ಥನೆಯ ಕಾಲಕ್ಕೆ ಈ ಕ್ಯಾಥ-ರೀನಳ ಗಂಡ ಉಗುಳಿದನಂತೆ. ಆತ ಸ್ವಾಭಾವಿಕವಾಗಿ ಉಗುಳಿದನೋ ಅಥವಾ ಜಪಾನೀ ಸೈನಿಕರನ್ನು ತಿರಸ್ಕರಿಸಿ ಉಗಳಿದನೋ ಎಂಬುದು ಆತನೇ ಬಲ್ಲ, ಮತ್ತು ದೇವರೇ ಬಲ್ಲ. ಜಪಾನೀ ಅಧಿಕಾರಿ ಅದನ್ನು ಗಮನಿಸಿ ಹಿಂದು ಮುಂದೆ ವಿಚಾರ ಮಾಡದೇ ಪಿಸ್ತೂಲಿನಿಂದ ೨-೩ ಗುಂಡುಗಳನ್ನು ಕ್ಯಾಥರೀನಳ ಗಂಡನಮೇಲೆ ಝಾಡಿಸಿಬಿಟ್ಟನು. ತತ್‌ಕ್ಷಣ ಆತ ನೆಲಕ್ಕುರುಳಿ ಗತಪ್ರಾಣನಾದ. ಆತನ ಹೆಣವನ್ನು ದರದರನೇ ಎಲ್ಲ ಜನರ ಗುಂಪಿನ ಎದುರು ತಂದೊಗೆದು ಜಪಾನೀ ಅಧಿಕಾರಿ ಗುಡುಗಿ ಹೇಳಿದ.

“ಯಾರಾದರೂ ನಿಪ್ಪೋನ ಸರಕಾರಕ್ಕೆ ಅವಮಾನ ಮಾಡಿದರೆ, ಅಥವಾ ವಂಚನೆ ಮಾಡಿದರೆ ಅವರಿಗೆ ಇದೇ ದುರ್ಗತಿ ಕಾದು ಕುಳಿತಿದೆ ಎಂದು ಚೆನ್ನಾಗಿ ಅರಿಯಿರಿ.”

ನೋಡಿದ ಜನವೆಲ್ಲ ತೆಪ್ಪಗಾದರು. ಯಾರಿಗೂ ಈ ಕೃತಿಯನ್ನು ಪ್ರತಿ ಭಟಿಸಲು ಶಕ್ತಿ ಉಳಿದಿರಲಿಲ್ಲ. ಅಂದು ನಾನು ಅಲ್ಲಿಯೇ ನಿಂತಿದ್ದೆ. ಪ್ರಾರ್ಥನೆ ಮುಗಿದ ನಂತರ ಎಲ್ಲರೂ ಮೌನವಾಗಿ ಮರಳಿದರು. ನಾನು ಕ್ಯಾಥರೀನಳ ಸಹಾಯಕ್ಕೆ ನಿಂತುಕೊಂಡೆನು. ನಾವಿಬ್ಬರೂ ಅವನ ಹೆಣವನ್ನು ಮನೆಗೆ

ತಂದು ಅಂತ್ಯಸಂಸ್ಕಾರವನ್ನು ಮಾಡಿದೆವು. ಕ್ಯಾಥರೀನ್ ಆಗಿನ್ನೂ ಚಿಕ್ಕವಳೇ. ಸ್ವಲ್ಪ ದಿನ ದುಃಖಿಸಿದಳು. ಸಮಯ ಗತಿಸಿದಂತೆ ಆ ದುಃಖವನ್ನು ಮರೆಯ ತೊಡಗಿದಳು. ಈಗ ಸಂಪೂರ್ಣ ಮರೆತಿದ್ದಾಳೆ. ಅವಳ ಲಗ್ನವಾಗಿ ಇನ್ನೂ ಒಂದು ವರ್ಷವೂ ಸಂದಿರಲಿಲ್ಲ ಅವಳಿಗೆ ವೈಧವ್ಯ ಬಂದಿತು. ಈಗ ಅವಳು ವಿಧವೆ ಎಂದು ತಿಳಿದುಕೊಂಡೇ ಇಲ್ಲ. ಅಪರಿಚಿತರ ಮುಂದೆ 'Miss' ಎಂದೇ ಹೇಳಿಕೊಳ್ಳುತ್ತಾಳೆ. ಅದೇನೇ ಇರಲಿ ಮುಂದಿನ ಸಂಗತಿ ಇನ್ನೂ ಆಶ್ಚರ್ಯ ಕರವಿದೆ. ಮಗಳು ವಿಧವೆಯಾದ ಕೆಲ ತಿಂಗಳುಗಳಲ್ಲಿಯೇ ಕ್ಯಾಥರೀನಳ ತಾಯಿ ಒಬ್ಬ ಜಪಾನೀ ಅಧಿಕಾರಿಯ ಅನಧಿಕೃತ ಹೆಂಡತಿಯಾದಳು. ಅಂದಿನ ಪ್ರಸಂಗ ನಡೆದಾಗ ನಾನು ಕ್ಯಾಥರೀನಳ ಮನೆಯಲ್ಲಿಯೇ ಒಂದು ಕೋಣೆಯಲ್ಲಿ ಕುಳಿತುಕೊಂಡಿದ್ದೆ. ಕ್ಯಾಥರೀನಳ ಗಂಡ ನನ್ನ ಮಿತ್ರನಾಗಿದ್ದ. ಅವನ ಸಾವಿನಿಂದ ಆದ ನಷ್ಟವನ್ನು ತುಂಬಿಕೊಡಬೇಕೆಂದು ನಾನು ಬಯಸುತ್ತಿದ್ದೆ. ಸ್ವಚ್ಛ ಮಾತಿನಲ್ಲಿಯೇ ಹೇಳಬೇಕೆಂದರೆ ನಾನು ಕ್ಯಾಥರೀನಳನ್ನು ಮದುವೆ ಯಾಗಬೇಕೆಂದು ಪ್ರಯತ್ನಿಸುತ್ತಿದ್ದೆ. ಆ ಕಾರಣವಾಗಿ ನಾನು ಅವಳ ಮನೆಗೆ ಮೇಲಿಂದಮೇಲೆ ಹೋಗುತ್ತಿದ್ದೆ. ಅವಶ್ಯವೆನಿಸಿದಾಗ ಸ್ವಲ್ಪ ಸ್ವಲ್ಪ ಧನ ಸಹಾಯವನ್ನು ಮಾಡುತ್ತಿದ್ದೆ. ಅಂದು ಸಂಜೆ ನಾನು, ಕ್ಯಾಥರೀನ ಇಬ್ಬರೂ ಒಂದು ಕೋಣೆಯಲ್ಲಿ ಕುಳಿತಿದ್ದೆವು. ಒಮ್ಮೆಲೇ ಬೂಟ್ಸಿನ ಸಪ್ಪಳ ಆಯಿತು. ಕ್ಯಾಥರೀನ ನನ್ನನ್ನು ಒಮ್ಮೆಲೇ ಅಪ್ಪಿಕೊಂಡಳು. ಅವಳ ಅಪ್ಪುಗೆ ನನಗೆ ಬೇಕೆನಿಸಿದರೂ— ಅದರ ಸುಖವನ್ನು ಸವಿಯುವ ತಾಳ್ಮೆ ಆಗ ನನಗಿರಲಿಲ್ಲ. ಏಕೆಂದರೆ ನನಗೂ ಹೆದರಿಕೆಯಾಗಿತ್ತು. ಬೂಟ್ಸಿನ ಸಪ್ಪಳ ಯಾವನೋ ಒಬ್ಬ ಜಪಾನೀ ಸೈನಿಕನದೇ ಎಂಬುದು ನಿಶ್ಚಿತವಿದ್ದಿತು. ನಾನು ಬಾಗಿಲನ್ನು ಮುಂದೆ ಮಾಡಿ, ಕ್ಯಾಥರೀನಳನ್ನು ಹಿಂದಿನ ಖಿಡಕಿಯೊಳಗಿಂದ ಕೆಳಗಿಳಿಸಿ— ಹಿತ್ತಲಲ್ಲಿ ಬೆಳೆದಿದ್ದ ಹುಲ್ಲಿನಲ್ಲಿ ಅವಿತುಕೊಂಡು ಕುಳಿತುಕೊಳ್ಳಲು ಹೇಳಿದೆ. ಕ್ಯಾಥರೀನ ನನ್ನ ಸೂಚನೆಯಂತೆ ನಡೆದುಕೊಂಡಳು. ನಾನು ಅವಳು ಅವಿತು ಕೊಂಡದ್ದನ್ನು ಖಚಿತಪಡಿಸಿಕೊಂಡು ಬಾಗಿಲವನ್ನು ತೆರೆಯದೇ ಬಾಗಿಲದ ಹತ್ತಿರವೇ ನಿಂತುಕೊಂಡೆನು. ನಾನು ತುಂಬಾ ಅಂಜಿಹೋಗಿದ್ದೆ. ಕ್ಯಾಥ-ರೀನಳ ತಾಯಿ ಪಡಸಾಲೆಯಲ್ಲಿ ಅಧೀರಳಾಗಿ ನಿಂತುಕೊಂಡಿದ್ದಳು. ಮನೆಯ ಒಳಗೆ ಬಂದವನು ಜಪಾನೀ ಅಧಿಕಾರಿಯೇ ಆಗಿದ್ದ. ಆತ ವಿಕಟ ಹಾಸ್ಯ ಮಾಡುತ್ತ ಇಂಗ್ಲೀಶನಲ್ಲಿಯೇ ಕೇಳುತ್ತಿದ್ದ.

" ಗೇಶಾ ಹೌಸ್— "

ಕ್ಯಾಥರೀನಳ ತಾಯಿ ತಡವರಿಸುತ್ತ ಉತ್ತರಿಸಿದಳು.

" ನೊ ಗೇಶಾ ಹೌಸ್ ".

" ಓಹ್ ನೊ–ನೋ-ಫ್ಲಾವರ ಹೌಸ್ ".

" ನೊ—ನೊ ಫ್ಲಾವರ ಹೌಸ—ಸಿಂಪಲಿ ಹೌಸ್ ".

ಜಪಾನೀ ಅಧಿಕಾರಿ ಗಹಗಹಿಸಿ ನಕ್ಕು ಹೇಳಿದ.

" ಯು ಆರ್ ಗುಡ ಗೇಶಾ. ಕಮ್ ಆನ್ ".

" ........... ".

" ಹಾ ಮೆನಿ ಕಿಡ್ಸ ಹ್ಯಾವ್ ಯು ? "

" ನೋ ಕಿಡ್ಸ ".

" ನೋ ಕಿಡ್ಸ? ಆಯ ವಿಲ್ ಗಿವ್ಹ ಯು ಕಿಡ್ಸ ".

" ........... "

" ಏನೀ ಮೇಲ ಮೆಂಬರ ಇನಸ್ಪ್ಯಾಡ ".

" ನೋ—ನೋ ".

" ನೋ ? ಗೂಡ್ " ಜಪಾನೀ ಅಧಿಕಾರೀ ಗಹಗಹಿಸಿ ಕ್ಯಾಥರೀನಳ ತಾಯಿಯನ್ನು ಹಿಡಿದೆಳೆದು ಬದೀ ಕೋಣೆಗೆ ಕರೆದೊಯ್ದು ಬಾಗಿಲಿಗೆ ಚಿಲಕ ವನ್ನು ಹಾಕಿದ. ನಾನೆಲ್ಲವನ್ನೂ ಬಾಗಿಲ ಕಿಂಡಿಯೊಳಗಿಂದ ನೋಡುತ್ತಲೇ ಇದ್ದೆ. ಆದರೆ ಪ್ರತೀಕಾರದ ಶಕ್ತಿ ಇರಲಿಲ್ಲ. ಆ ಅಧಿಕಾರಿಯ ಟೊಂಕದಲ್ಲಿ ಪಿಸ್ತೂಲವಿದ್ದಿತು. ಕ್ಯಾಥರೀನಳ ಗಂಡನ ದುರ್ಗತಿ ಕಣ್ಣಾರೆ ಕಂಡಿದ್ದ ನನಗೆ ಪ್ರತೀಕಾರ ಮಾಡುವ ಅಲ್ಪ ಸ್ವಲ್ಪ ಶಕ್ತಿಯೂ ಇಲ್ಲದಾಯಿತು. ಮುಂದರ್ಧ ತಾಸಿನಲ್ಲಿ ಆ ಅಧಿಕಾರಿ ನಗುನಗುತ್ತ ಹೊರಬಿದ್ದು ಹೇಳಿದ.

" ಆಗೇನ ಟುಮಾರೊ- ಯು ಆರ್ ವ್ಹೆರಿ ವ್ಹೆರಿ ಗೂಡ್-ಮಾಯ ಪರಮನಂಟ ಗೇಶಾ ".

ಇಷ್ಟನ್ನೂ ಬಡಬಡಿಸಿ ಆತ ಮನೆಯಿಂದ ಹೊರಬಿದ್ದು ಮಾಯವಾದ. ನಾನು ಪಟ್ಟನೇ ಬಾಗಿಲು ತೆಗೆದು ಕ್ಯಾಥರೀನಳ ತಾಯಿ ಇದ್ದಲ್ಲಿಗೆ ಬಂದೆ. ನನ್ನನ್ನು ನೋಡಿ ಅವಳು ಮುಖವನ್ನು ಕೆಳಗೆ ಹಾಕಿದಳು. ನಾನೇನು ಮಾತನಾಡಬೇಕೆಂಬುದೇ ತಿಳಿಯಲಿಲ್ಲ. ಹಾಗೆಯೇ ಸುಮ್ಮನೇ ನಿಂತು

ಕೊಂಡೆನು. ಕ್ಯಾಥರೀನಳ ತಾಯಿಯೇ ಹೇಳಿದಳು. "ನಾನೇನು ಮಾಡ ಬೇಕಿತ್ತು ?"

ಹೌದು. ಅದೇ ಪ್ರಶ್ನೆ ನನಗೂ ಕಾಡುತ್ತಿತ್ತು. ಅದು ಹೊಳೆಯುವ ಮೊದಲೇ ಬೆಕ್ಕು ಇಲಿಯನ್ನು ನುಂಗಿತ್ತು. ಅಸಹಾಯ ಸ್ಥಿತಿಯಲ್ಲಿ ಇದ್ದ ಕ್ಯಾಥರೀನಳ ತಾಯಿಯನ್ನು ದೂಷಿಸುವದಾದರೂ ಹೇಗೆ. ನನ್ನಂತಹನಿಗೇ ಬಾಗಿಲ ತೆಗೆವ ಧೈರ್ಯವಿಲ್ಲದಾಗ ಅವಳಂತೂ ಹೆಣ್ಣುಮಗಳು. ಮಾಡುವಳೇನು. ಆಗಿಹೋದ ಮಾತಿಗೆ ಚಿಂತಿಸಿ ಫಲವಿಲ್ಲವೆಂದುಕೊಂಡೆ. ಅಂಥ ದುಃಖದಲ್ಲಿ ನನಗಾದ ಸಂತೋಷವೆಂದರೆ— ಕ್ಯಾಥರೀನಳು ಸುರಕ್ಷಿತಳಾಗಿ ಉಳಿದು ಕೊಂಡದ್ದು. ಅದೊಂದು ಕೆಲಸವನ್ನಾದರೂ ಧೈರ್ಯದಿಂದ ಮಾಡಿದ್ದಕ್ಕೆ ನನ್ನನ್ನು ನಾನೇ ಅಭಿನಂದಿಸಿಕೊಂಡೆ. ನಾನು ಕ್ಯಾಥರೀನಳನ್ನು ಕರೆದು ಕೊಂಡು ಬಂದು, ದಿನವೂ ಜಪಾನೀ ಅಧಿಕಾರಿ ಬಂದಾಗ ಕಿಟಕಿಯಲ್ಲಿಂದ ಜಿಗಿದು ಹುಲ್ಲಿನ ಪೊದರಿನಲ್ಲಿ ಅವಿತುಕೊಂಡು ಕೂಡಲು ಹೇಳಿ ನಾನು ಮನೆ ಯತ್ತ ನಡೆದೆ.

ಅಂದಿನಿಂದ ಜಪಾನು ಸೋಲನಪ್ಪುವವರೆಗೂ ಕ್ಯಾಥರೀನಳ ತಾಯಿ ಆ ಅಧಿಕಾರಿಯು ಅನಧಿಕೃತ ಹೆಂಡತಿಯಾಗಿ ಉಳಿದುಕೊಂಡಳು. ಜಪಾನೀ ಸೈನಿಕರು ಸೋಲನ್ನಪ್ಪುವವರೆಗೂ ಕ್ಯಾಥರೀನ ಪವಿತ್ರಳಾಗಿಯೇ ಉಳಿದು ಕೊಂಡಳೆಂದು ನಾನು ಭಾವಿಸಿರುವೆ. ಮುಂದೆ ಮಾತ್ರ ಅವಳ ನಡೆವಳಿಕೆಯ ವಿಷಯ ಸಂದೇಹ ಬರತೊಡಗಿತು. ನಾನೊಂದು ಸಲ ಒಂದು ಸುದ್ದಿಯನ್ನು ಕೇಳಿ ಝುಬರಿಸಿದ್ದೆ. ಅದಕ್ಕೆ ಕ್ಯಾಥರೀನ ನನ್ನನ್ನು ದೂರಿಕೊಂಡಳು. ನಾನು ಆದದ್ದನ್ನೆಲ್ಲ ಮರೆತು ಮದುವೆಯಾಗಲು ಕೇಳಿಕೊಂಡೆ. ಅವಳು ಒಪ್ಪಲಿಲ್ಲ. ಅವಳ ಗಂಡ ಸತ್ತಾಗ ನಾನೇ ಅವಳಿಗೆ ಸಹಾಯವನ್ನು ಸಲ್ಲಿಸಿದ್ದೆ. ಜಪಾನೀ ಅಧಿಕಾರಿ ಮನೆಗೆ ಬಂದಾಗ ನಾನೇ ಅವಳನ್ನು ಅಪಾಯದಿಂದ ಸಂರಕ್ಷಿಸಿದ್ದೆ. ಎಲ್ಲವೂ ಹೊಳೆಯಲ್ಲಿ ಹುಣಸೇಹಣ್ಣು ತೊಳೆದಂತಾಯಿತು. ಅಂದಿನಿಂದ ನಮ್ಮಿಬ್ಬರಲ್ಲಿ ಮಾತಿಲ್ಲ. ಯುದ್ಧವಂತೂ ಮುಗಿಯಿತು. ನೀವೆಲ್ಲ ಈಗ ಬಂದಿದ್ದೀರಿ. ನಿಮ್ಮಂತಹರೇ ಈಗ ಅವಳಿಗೆ ಆಧಾರ. ನಿಮ್ಮದು ಭೋಳೆ ಸ್ವಭಾವ. ಆದಕ್ಕೆ ನಿಮ್ಮನ್ನು ಎಚ್ಚರಿಸಿದೆ".

ಈ ಕತೆಯನ್ನು ಹೇಳಿ ವೇಲಾಯುಧನ್ ಒಂದು ಸಿಟ್ಟುಸಿರನ್ನು ಬಿಟ್ಟನು. ಆತ ಹೇಳಿದ ಕಥೆ ಅದ್ಭುತವೆನಿಸಿತು. ನಾನು ಆತನನ್ನು ಸಂತೈಸುತ್ತ ಹೇಳಿದೆ

" ನೀನೇನೂ ಹೆದರಬೇಡ. ನಾನು ಅಂಥವನಲ್ಲ. ನಾನು ಮಾಂಸ ತಿನ್ನುತ್ತೇನೆ. ಸೆರೆ ಕುಡಿಯುತ್ತೇನೆ, ಸಿಗಾರೇಟು ಸೇದುತ್ತೇನೆ. ಆದರೆ ಇಂಥ ಹೇಯ ಕೆಲಸಕ್ಕೆ ಕೈ ಹಾಕಲಾರೆ. ನಾನು ಕ್ಯಾಥರೀನಳನ್ನು ಒಬ್ಬ ಗೆಳೆಯನಂತೆ ಕಾಣುತ್ತೇನೆ ವಿನಃ ಮತ್ತಾವ ಸಂಬಂಧವೂ ಇಲ್ಲ."

ಇಷ್ಟನ್ನು ಹೇಳಿ ಮತ್ತೆ ನನ್ನ ವಾಸಸ್ಥಳಕ್ಕೆ ಬಂದುಬಿಟ್ಟೆ. ಅಂದು ನನಗೆ ಮನಃಸ್ವಾಸ್ಥ್ಯವೇ ಉಳಿಯಲಿಲ್ಲ. ಕ್ಯಾಥರೀನ ನನ್ನ ಮುಂದೆ ಹಲವಾರು ಸಲ ತನ್ನ ಮದುವೆಯಾಗಿಲ್ಲವೆಂದೇ ಹೇಳಿದ್ದಳು. ನನ್ನ ಜತೆಯಲ್ಲಿ ಸುಳ್ಳು ಮಾತನಾಡುವದರಲ್ಲಿ ಯಾವ ಆಶಯವಿದೆ ಎಂಬುದು ತಿಳಿಯದೆ ಪೋಯಿತು. ಅವಳ ಯೋಚನೆಯಿಂದ ಕೆಲ ಸಮಯ ನಿದ್ದೆ ಬಾರದೇ ಹೋಯಿತು.

ಮರುದಿನ ಸಂಜೆಗೆ ಪೇಟೆಗೆ ಹೋಗದೇ, ಊಟ ಮುಗಿದಾಕ್ಷಣ ನೇರವಾಗಿ ಕ್ಯಾಥರೀನಳ ಮನೆಗೆ ಹೋದೆ. ಕ್ಯಾಥರೀನ ಮತ್ತು ಅವಳ ತಾಯಿ ಪಡಸಾಲೆಯಲ್ಲಿ ಕುಳಿತುಕೊಂಡಿದ್ದರು. ಅವರ ಜತೆಯಲ್ಲಿ ಹರಟೆಯಾಡಲು ನೆರೆಮನೆಯ ಇಬ್ಬರು ಚೀನೀ ಮಹಿಳೆಯರು ಬಂದು ಕುಳಿತುಕೊಂಡಿದ್ದರು. ನಾನು ಬಂದುದರಿಂದ ಆ ಚೀನೀ ಮಹಿಳೆಯರು ಸಂಕೋಚಪಟ್ಟುಕೊಳ್ಳಲಿಲ್ಲ. ಏಕೆಂದರೆ ಅವರು ಹಲವಾರು ಸಲ ನನ್ನನ್ನು ಕಂಡಿದ್ದರು. ನಾನು ಮಾತ್ರ ಅವರು ಅಲ್ಲಿ ಕುಳಿತುಕೊಂಡಿದ್ದರಿಂದ ಸಂಕೋಚಪಟ್ಟುಕೊಂಡೆ. ಏಕೆಂದರೆ ನನಗೆ ಕ್ಯಾಥರೀನಳ ಜತೆಯಲ್ಲಿ ಅವಳ ಪೂರ್ವ ಜೀವನದ ವಿಷಯವಾಗಿ ಮಾತನಾಡುವದಿತ್ತು. ನನ್ನ ಕುತೂಹಲವನ್ನು ಬದಿಗೆ ಸರಿಸಬೇಕಾಯಿತು. ನಾನೂ ಅವರಲ್ಲಿ ಸೇರಿಕೊಂಡು ಹರಟೆಯಾಡಲು ಪ್ರಾರಂಭಿಸಿದೆ. ಹರಟೆಗೆ ತಳಬುಡವೆಂಬುದಿರುವದಿಲ್ಲವೆಂದು ಬಲ್ಲವರು ಹೇಳುತ್ತಾರೆ. ಅದು ನಿಜವೇನೋ. ಏಕಂದರೆ ನಮ್ಮ ಹರಟೆಯ ವಿಷಯ ಮಾತಿನಿಂದ ಮಾತಿಗೆ ಪ್ರಯಾಣಿಸುತ್ತ ಜ್ಯೋತಿಷ್ಯ ಶಾಸ್ತ್ರದ ವರೆಗೆ ಬಂದಿತು ಆ ಚೀನೀ ಮಹಿಳೆ ಹೇಳಿದಳು— "ಭಾರತೀಯರು ಕೈ ನೋಡಿ ಭವಿಷ್ಯ ಹೇಳುವದರಲ್ಲಿ ನಿಪುಣರಿರುತ್ತಾರೆಂದು ಕೇಳಿದ್ದೇವೆ" ನಾನು ತಟ್ಟನೇ ಸುಳ್ಳನ್ನು ಹೇಳಿದೆ. "ಹೌದು. ನಾನಂತೂ ಅದನ್ನು ಚೆನ್ನಾಗಿ ಅಭ್ಯಸಿಸಿದ್ದೇನೆ." ಈ ಮಾತನ್ನು ಕೇಳಿದ ಕ್ಯಾಥರೀನ ಒಮ್ಮೆಲೆ ತನ್ನ ಕೈಯನ್ನು ನನ್ನ ಕೈಯಲ್ಲಿರಿಸಿ "ನನ್ನ ಕೈ ನೋಡಿ ಹೇಳಿರಿ." ಎಂದು ಒತ್ತಾಯಪಡಿಸಿದಳು. ನಾನು ಹತ್ತಿರವಿದ್ದ ದೀಪವನ್ನು ದೊಡ್ಡದನ್ನಾಗಿ ಮಾಡಿ ಕೈಯನ್ನು ನೋಡತೊಡಗಿದೆ. ನನ್ನ ನಟನೆ ತುಂಬಾ ಚೆನ್ನಾಗಿದ್ದಿತು.

ತುಸು ಹೊತ್ತು ವಿಚಾರ ಮಾಡಿದಂತೆ "ನಿನಗೇನು ಕೇಳಬೇಕಾಗಿದೆ ?" ಎಂದೆ. ಆದಕ್ಕೆ ಕ್ಯಾಥರೀನ "ನನ್ನ ಮದುವೆ ಎಂದಾಗುತ್ತದೆ ಎಂಬುದನ್ನು ಹೇಳಿರಿ" ಎಂದಳು.

ನಾನು ಗಂಭೀರ ಮುಖಮುದ್ರೆಯನ್ನು ಧರಿಸಿ ಬಾಯಿಯಿಂದ ಸುಳ್ಳು ಸುಳ್ಳೇ ಏನನ್ನೋ ಪುಟಪುಟಿಸಿ ಹೇಳಿದೆ.

"ಏನೋ ಆಶ್ಚರ್ಯ. ಕೈಯಮೇಲಿಂದ ಒಂದು ಸಂಗತಿ ತಿಳಿಯುತ್ತದೆ. ಅದು ಸುಳ್ಳೊ ಸತ್ಯವೋ ದೇವರೇ ಬಲ್ಲ. ಆದರೆ ಕೈಯೊಳಗಿನ ಗೆರೆಯೇ ಹೇಳುತ್ತದೆ."

"ಏನು, ಏನು ಹೇಳುತ್ತದೆ ?" ಸ್ವಲ್ಪ ಅಧೀರಳಾಗಿ ಕ್ಯಾಥರೀನ ಕಾತರ ಸ್ವರದಲ್ಲಿ ಕೇಳಿದಳು. ನಾನು ಧೈರ್ಯದಿಂದ ಹೇಳಿದೆ.

"ಈ ಗೆರೆಯಮೇಲಿಂದ ಗೊತ್ತಾಗುವದೇನಂದರೆ ಈ ಮೊದಲು ನಿನ್ನ ಲಗ್ನವಾಗಿರಲೇಬೇಕು."

ಕ್ಯಾಥರೀನ ಅವಾಕ್ಕಾದಳು. ಉಳಿದ ಮೂವರೂ ಸಾವರಿಸಿಕೊಂಡು ಕುಳಿತರು.

ನಾನು ಸ್ವಲ್ಪವೂ ಅಂಜದೇ ಹೇಳಿದೆ— "ಗೆರೆಯ ಮೇಲಿಂದಂತೂ ಹಾಗೆಯೇ ಎನಿಸುತ್ತದೆ. ಎನಿಸುತ್ತದೆ ಏಕೆ ಸ್ಪಷ್ಟವೇ ಇದೆ."

ಅಂಜಂಜುತ್ತ ಕ್ಯಾಥರೀನ ಕೇಳಿದಳು "ಹಾಗಾದರೆ ನನ್ನ ಗಂಡನೆಲ್ಲಿ ಹೇಳಿ ?"

ನಾನು ಮತ್ತೆ ಗಂಭೀರ ಠೀವಿಯನ್ನು ಧರಿಸಿ ಸೂಕ್ಷ್ಮವಾಗಿ ಕೈಯನ್ನು ನೋಡತೊಡಗಿದೆ. ಹಾಗೆ ನೋಡಿ ಮತ್ತೆ ಹೇಳಿದೆ.

"ಕ್ಷಮಿಸಿ. ಆತ ಈಗ ಇಲ್ಲ, ಅವನ ಅವಸಾನವಾಗಿರಲೇಬೇಕು".

ಕುಳಿತವರೆಲ್ಲರೂ ಆಶ್ಚರ್ಯದಿಂದ ದಂಗುಬಡೆದು ಕುಳಿತರು. ನಾನು ಗಂಭೀರನಾಗಿಯೇ ಹೇಳತೊಡಗಿದೆ.

"ಇಲ್ಲಿ ಇದ್ದದ್ದನ್ನೇ ನಾನು ಹೇಳುತ್ತಿದ್ದೇನೆ. ಅದು ಸುಳ್ಳಿದ್ದರೆ ಕ್ಷಮಿಸ ಬೇಕು. ನಿಮ್ಮ ಗಂಡ ಸಾಧಾರಣ ಸಾವನ್ನಪ್ಪಲಿಲ್ಲ. ಯಾರೋ ಆತನನ್ನು ಕೊಂದಿರಬೇಕು". ಕುಳಿತವರೆಲ್ಲರಿಗೂ ನನ್ನ ಜೋತಿಷ್ಯ ಜ್ಞಾನದ ಪ್ರಖರತೆ

ದಂಗುಬಡಿಸಿತು. ಅವರ ಮುಖದ ಮೇಲಿನ ಭಾವ ನೋಡಿ ನನಗೆ ಒಳಗೊಳಗೇ ನಗು ಬರುತ್ತಿತ್ತು. ಆದರೇನು ಸಂದರ್ಭವೇ ಅಂತಹದಿತ್ತು. ನಗುವನ್ನು ನುಂಗತೊಡಗಿದ್ದೆ— ಸುಳ್ಳನ್ನು ಕಾರತೊಡಗಿದ್ದೆ. ಮತ್ತೆ ಮುಂದುವರಿಸಿದೆ.

"ನಿನ್ನ ಗಂಡ ನಮ್ಮ ದೇಶದವನಲ್ಲವೆಂದು ಇನ್ನೊಂದು ಗೆರೆ ಹೇಳುತ್ತಿದೆ."

ಕ್ಯಾಥರೀನ್ ತುಂಬಾ ಬೆಂವೆತುಹೋದಳು. ಅವಳ ಕಣ್ಣಲ್ಲಿಂದ ಒಂದೆರಡು ಹನಿಗಳು ಉದುರಿದವು. ನಾನು ಅವಳನ್ನು ಸಂತೈಸಿದೆ. ಕ್ಯಾಥರೀನಳ ತಾಯಿಗೆ ಈ ವೇಳೆಗೆ ಯಾವ ಹುರುಪು ಬಂದಿತೋ ದೇವರೇ ಬಲ್ಲ. ಅವಳೂ ತನ್ನ ಕೈಯನ್ನು ನನ್ನ ಕೈಗಿತ್ತಳು. ಅವಳ ಭವಿಷ್ಯವನ್ನೂ ಸರಿಯಾಗಿಯೇ ಹೇಳಿದೆ. ಎಲ್ಲರಿಗೂ ನನ್ನ ಭವಿಷ್ಯ ಜ್ಞಾನದ ವಿಷಯಕ್ಕೆ ಕೌತುಕವೆನಿಸತೊಡಗಿತು.

ಕುಸ್ತಿಯನ್ನು ಒಗೆದ ಪೈಲವಾನನಂತೆ ನಾನು ಗೆಲುವಿನ ಮುಖ ಮಾಡಿ ಜೇಬಿನೊಳಗಿಂದ ಪ್ಲೇಯರ್ಸ ನೇವ್ಹಿ ಕಟ್ಟನ್ನು ಹೊರತೆಗೆದು, ಸಿಗರೇಟನ್ನು ಹಚ್ಚಿ ಸೇದತೊಡಗಿದೆ. ಆಗ ಕ್ಯಾಥರೀನಳ ತಾಯಿ ಇನ್ನುಳಿದ ಇಬ್ಬರು ಚೀನೀ ಮಹಿಳೆಯರಿಗೆ ಕೈಯನ್ನು ತೋರಿಸಲು ಒತ್ತಾಯಪಡಿಸತೊಡಗಿದ್ದಳು. ಆದರೆ ಅವರು ಬೇಡ ಬೇಡವೆಂದು ತಪ್ಪಿಸಿಕೊಳ್ಳತೊಡಗಿದರು. ಅವರಿಬ್ಬರ ಮುಖದ ಮೇಲೆ ಹೆದರಿಕೆ ವ್ಯಾಪಿಸಿತ್ತು. ನಾನು ಈ ವರೆಗೆ ಸತ್ಯ ಭವಿಷ್ಯ ನುಡಿದದ್ದನ್ನು ಕಂಡು ಅವರು ಹೆದರಿದ್ದರು. ಅವರ ಹೆದರಿಕೆಯಿಂದ ಅವರ ಜೀವನದಲ್ಲೂ ಇಂಥ ಘಟನೆಗಳು ಕಾಲಿಕ್ಕಿರಬಹುದೆಂದು ಭಾವಿಸಿದೆ. ಆದರೂ ಅವರೆಲ್ಲಿ ಕೈ ತೋರಿಸುವರೋ ಎಂಬ ಭಯ ನನ್ನನ್ನು ವ್ಯಾಪಿಸಿತು. ಆದರೆ ಅವರು ಕೈಯನ್ನು ತೋರಿಸಲು ಒಪ್ಪದೇ ಇದ್ದುದನ್ನು ಕಂಡು ನನಗೆ ಧೈರ್ಯ ಬಂದಂತಾಗಿ ಹೇಳಿದೆ "ತೋರಿಸರಲ್ಲಾ ಆದರಾಗೇನದ?" ಅವರಿಬ್ಬರೂ ಒಪ್ಪಲಿಲ್ಲ. ಅವರ ಈ ಕೃತಿಗಾಗಿ ನಾನು ಅವರನ್ನು ಸಾವಿರ ಸಲ ಮನದಲ್ಲಿಯೇ ಅಭಿನಂದಿಸಿದೆ.

ಸಿಗಾರೇಟು ಸೇದುವದು ಮುಗಿದಾಕ್ಷಣ ನಾನು ಹೊರ ಹೊರಟೆ. ಹೊರ ಬೀಳುತ್ತಿದ್ದಂತೆ ಕ್ಯಾಥರೀನಳನ್ನು ಕೇಳಿದೆ "ಪೇಟೆಯ ಕಡೆಗೆ ಅಡ್ಡಾಡಲು ಬರುತ್ತೀಯಾ? ಕ್ಯಾಥರೀನ" ಬರುವೆನೆಂದು ಹೇಳಿ "ಡ್ರೆಸ್‌ನ್ನು ಬದಲಿಸಿ

ನನ್ನ ಜತೆಯಲ್ಲಿ ಹೊರಟಳು. ನಾವಿಬ್ಬರೂ ಬಯಲಿನಲ್ಲಿ ಅಡ್ಡಾಡಿ ಊರ ನಟ್ಟ ನಡುವಿನ ತೋಟದಲ್ಲಿಯ ಬೆಂಚೊಂದರ ಮೇಲೆ ಕುಳಿತುಕೊಂಡೆವು. ಇಬ್ಬರೂ ಕ್ಷಣ ಹೊತ್ತು ಸುಮ್ಮನೇ ಕುಳಿತುಕೊಂಡಿದ್ದೆವು. ನಾನೇ ಮಾತನಾಡಿಸಿದೆ.

" ಕ್ಯಾಥರೀನ ಒಂದು ಮಾತು ಕೇಳಬಹುದೇ ? "

" ಓಹೋ ಅವಶ್ಯವಾಗಿ ".

" ನಾನು ಹೇಳಿದ ಭವಿಷ್ಯ ನಿಜವೇ ? "

" .......... "

" ನಾನೇನೂ ನಿನ್ನನ್ನು ತಪ್ಪು ತಿಳಿದುಕೊಳ್ಳಲಾರೆ. ನನಗೂ ನಿನಗೂ ಯಾವ ಸಂಬಂಧ ? ನಾಳೆ ನಾನು ವಾಪಸು ನನ್ನ ದೇಶಕ್ಕೆ ಹೋಗುವವ. ಆದರೆ ಒಂದು ಜಿಜ್ಞಾಸೆಯ ಮೂಲಕ ಕೇಳಿದೆ ".

" ಹೌದು ".

" ಅದೇ ಬೇಕಿತ್ತು ನನಗೆ ".

" ನಿಮ್ಮ ಜ್ಯೋತಿಷ ಜ್ಞಾನ ನಿಜಕ್ಕೂ ಹೊಗಳುವಂಥಾದ್ದು ".

" ಜೋತಿಷ್ಯ ಜ್ಞಾನವೆಂದು ಹೇಳಬೇಡ, ವ್ಯವಹಾರ ಜ್ಞಾನವೆಂದು ಹೇಳು. ನನ್ನೆದುರಿನಲ್ಲಿ ಕುಮಾರಿಯೇ ಇದ್ದೇನೆಂದು ಸುಳ್ಳು ಹೇಳುವದರಲ್ಲಿ ಉದ್ದೇಶವೇನಿತ್ತು ? ".

" ನಾನು ಸುಳ್ಳು ಹೇಳುವದಕ್ಕೆ ನನ್ನ ಸುತ್ತಮುತ್ತಲಿನ ಪರಿಸ್ಥಿತಿಯೇ ಕಾರಣ ".

" ನಿನ್ನ ಪೂರ್ವಪರಿಚಯ ಅಲ್ಪಸ್ವಲ್ಪ ಗೊತ್ತಾಗಿದ್ದರೂ ಸರಿಯಾಗಿದ್ದಷು ಹೇಳುವಿಯಾ ? "

" ಅಗತ್ಯವಾಗಿ ".

" ಈ ಹಿಂದೆ ನಾವು ಪಹಾಂಗ ಸ್ಟ್ರೀಟನಲ್ಲಿರುತ್ತಿದ್ದೆವು. ನಮ್ಮ ನೆರೆಮನೆಯಲ್ಲಿ ಒಂದು ತಮಿಳು ಕುಟುಂಬ ವಾಸಿಸುತ್ತಿತ್ತು. ವಿಧವೆ ತಾಯಿ, ತರುಣ ಮಗ ಇಬ್ಬರೇ ಅಲ್ಲಿದ್ದರು ಅವರ ಮನೆಯಾಚೆ ಮತ್ತೊಂದು ತಮಿಳು ಕುಟುಂಬ ವಾಸಿಸುತ್ತಿದ್ದು ಇಬ್ಬರು ಅಣ್ಣ-ತಮ್ಮಂದಿರು, ತಾಯಿ ಹೀಗೆ ಮೂರು ಜನ ಆ ಮನೆಯಲ್ಲಿದ್ದರು. ಇಬ್ಬರಲ್ಲಿ ಅಣ್ಣ ಒಬ್ಬ ಜಪಾನೀ ಹುಡಿಗೆ

ಯನ್ನು ಮದುವೆ ಮಾಡಿಕೊಂಡು ಜರಂಟಂಟಿಗೆ ನಡೆದುಬಿಟ್ಟ. ಉಳಿದವ ತಮ್ಮ, ಅವನ ಹೆಸರು ವೇಲಾಯುಧನ್ ತಂದೆ ಹಾಕಿಕೊಟ್ಟ ಕಿರಾಣಿ ಅಂಗಡಿ ಯನ್ನಿರಿಸಿಕೊಂಡಿದ್ದ. ಈ ವೇಲಾಯುಧನ್ ನನಗೆ ಮೊದಲಿನಿಂದಲೂ ಪೀಡೆ ಯನ್ನು ಕೊಡುತ್ತಿದ್ದ. ತನ್ನನ್ನು ಮದುವೆಯಾಗಬೇಕೆಂದು ನನ್ನನ್ನು ಒತ್ತಾಯ ಪಡಿಸತೊಡಗಿದ. ಆದರೆ ನಾನದಕ್ಕೆ ಒಪ್ಪಲಿಲ್ಲ. ನಮ್ಮ ನೆರೆಮನೆಯ ತಮಿಳು ಯುವಕ ಗೋಪಾಲನ್, ಡಿಸ್ಟ್ರಿಕ್ಟ ಕಮೀಶನ್ ಆಫೀಸಿನಲ್ಲಿ ಕಾರಕೂನನಿದ್ದ. ಆತ ಸದಾ ಗಂಭೀರನಾಗಿರುತ್ತಿದ್ದ. ಆತನನ್ನು ಹಲವಾರು ಸಲ ನಾನು ಸಂಧಿ ಸಿದ್ದೆ. ಹೀಗಿದ್ದೂ ನಾವೆಂದೂ ಮರ್ಯಾದೆಯ ಮೇರೆಯನ್ನು ಮೀರಿರಲಿಲ್ಲ. ನಮ್ಮಿಬ್ಬರ ಪರಿಚಯ ನಿಧಾನವಾಗಿ ಪ್ರಣಯದಲ್ಲಿ ಪರಿಣಮಿಸಿತು. ಈ ವೇಳೆ ಯಲ್ಲಿಯೇ ನನ್ನ ತಂದೆ ತೀರಿಕೊಂಡರು. ಮುಂದೆ ಒಂದು ವರುಷದಲ್ಲಿ ನಾವಿ ಬ್ಬರೂ ಲಗ್ನವಾಗಬೇಕೆಂದು ನಿರ್ಧರಿಸಿ ಲಗ್ನ ಮಾಡಿಕೊಂಡೆವು. ಯಾವ ವಿಷ ಗಳಿಗೆಯಲ್ಲಿ ನನ್ನ ಲಗ್ನವಾಯಿತೋ, ಮರುವರುಷವೇ ಮಲಾಯಾ ಜಪಾನಿಗಳ ಅಧೀನಕ್ಕೆ ಬಂದಿತು.

ಈ ಮಧ್ಯೆ ವೇಲಾಯುಧನ್ ನಮ್ಮಿಬ್ಬರ ವಿಷಯವಾಗಿ ಹೊಟ್ಟೆಕಿಚ್ಚನ್ನು ಪಡತೊಡಗಿದ. ಆತನಿಗೆ ನಮ್ಮಿಬ್ಬರ ಸಂಸಾರ ಸುಖದಿಂದ ಸಾಗಿದ್ದನ್ನು ನೋಡಲಾಗಲಿಲ್ಲ. ಆತನ ಕುತಂತ್ರದ ಕಲ್ಪನೆ ನನಗಾಗ ಬರಲಿಲ್ಲ. ಜಪಾನಿ ಗಳು ಈ ಊರಲ್ಲಿ ಠಾಣ್ಯ ಹಾಕಿದಮೇಲೆ ಕೆಲವು ಸ್ವಾರ್ಥಿಗಳು ಅವರ ಬೆನ್ನು ಹಿಂದೆ ಅಡ್ಡಾಡಿ ತಮಗಾಗದವರ ಮೇಲೆ ಕ್ರಮ ತೆಗೆದುಕೊಳ್ಳುವದರ ಸಲುವಾಗಿ ಜಪಾನಿ ಅಧಿಕಾರಿಗಳನ್ನು ಹುರಿದುಂಬಿಸತೊಡಗಿದರು. ವೇಲಾಯುಧನ್‌ನೂ ಅಂಥವರಲ್ಲೊಬ್ಬನಾಗಿದ್ದನೆಂದು ತದನಂತರ ತಿಳಿಯಿತು. ಆತನೂ ಈ ಊರ ಅಧಿಕಾರಿಯ ಕಿವಿಯಲ್ಲಿ ಗೋಪಾಲನ್ ಬ್ರಿಟಿಶರ ಗುಪ್ತಚಾರ ಎಂದೆಲ್ಲ ತುಂಬಿ ದನು. ಆ ಅಧಿಕಾರಿ ಗೋಪಾಲನ್‌ನನ್ನು ದಂಡಿಸುವದಕ್ಕಾಗಿ ಕಾರಣಗಳನ್ನು ಹುಡುಕತೊಡಗಿದ್ದ. ಸಾಮೂಹಿಕ ಪ್ರಾರ್ಥನೆಯ ಕಾಲಕ್ಕೆ ಆತ ಉಗುಳಿದ ಎಂಬ ಒಂದು ಕ್ಷುಲ್ಲಕ ಕಾರಣವನ್ನು ಮುಂದೆ ಮಾಡಿ ಆ ಅಧಿಕಾರಿ ಆತನನ್ನು ಗುಂಡಿಕ್ಕಿ ಕೊಂದುಬಿಟ್ಟ. ಅಂಥ ಆಪತ್ತಿನ ಸಮಯದಲ್ಲಿ ವೇಲಾಯುಧನ್ ನನ್ನ ನೆರವಿಗೆ ಬಂದವನಂತೆ ನಟಿಸಿ, ಮೇಲಿಂದ ಮೇಲೆ ಮನೆಗೆ ಬರತೊಡಗಿದ. ಸಂಕಟ ಸಮಯದಲ್ಲಿದ್ದುದರಿಂದ ನನ್ನ ತಾಯಿ ಆತನಿಂದ ಕೆಲ ಹಣವನ್ನು ಸಾಲವಾಗಿ ತೆಗೆದುಕೊಂಡಳು. ಮುಂದೆ ಒಬ್ಬ ಜಪಾನೀ ಅಧಿಕಾರಿ ಜುಲುಮೆ

ಯಿಂದ ನನ್ನ ತಾಯಿಯ ಶೀಲವನ್ನು ಕೆಡಿಸಿದ. ಒಮ್ಮೆ ತೊಯ್ದಮೇಲೆ ಇನ್ನೊಂದೆರಡು ಕೊಡ ನೀರು ಸುರುವಿದರೇನು! ಮುಂದೆ ನನ್ನ ತಾಯಿ ಆತನ ಹೆಂಡತಿಯಾಗಿಯೇ ಬಾಳಿದಳು. ಒಂದು ಸಲ ಆ ಅಧಿಕಾರಿ ಭರ್ತಿ ಕುಡಿದು ಮಬ್ಬಾದಾಗ ಎಲ್ಲವನ್ನೂ ಹೇಳಿದ. "ನಿನ್ನ ಮಗಳನ್ನು ವೇಲಾಯುಧನ್ ಮದುವೆಯಾದನೇ? ಆತನ ನಡುವೆ ಇದ್ದ ಗುಡ್ಡ ಗೋಪಾಲ ನನ್ನು ನಾನೇ ಕೊಲ್ಲಿಸಿದೆ. ಕೇವಲ ವೇಲಾಯುಧನ್‌ನ ಒತ್ತಾಯದ ಮೂಲಕ. ಈಗ ಆ ಉಪಕಾರಕ್ಕೆ ವೇಲಾಯುಧನ್ ನಾನು ಹೇಳಿದ್ದನ್ನು ಕೊಡಲೇಬೇಕು. ನಾನು ಆ ಕ್ಯಾಥರೀನ್‌ಳ ಜತೆಯಲ್ಲಿ ಅವಕಾಶ ಕೊಡಬೇಕು" ಎಂದೆಲ್ಲ ಹರಟ ತೊಡಗಿದ್ದ. ನಾನು ಅದನ್ನೆಲ್ಲ ಒಳಕೋಣೆಯಲ್ಲಿ ಅವಿತು ನಿಂತು ಕೇಳ ತೊಡಗಿದ್ದೆ. ವೇಲಾಯುಧನ್ ಎಷ್ಟು ಕುಹುಕಿ, ಕ್ರೂರನಾಗಿದ್ದನೆಂಬುದರ ಸ್ಪಷ್ಟ ಕಲ್ಪನೆ ನನಗಾಯಿತು. ಅಂದಿನಿಂದ ನನಗೆ ಆತನನ್ನು ಕಂಡರೇ ಆಗದು. ಆತನ ಹೆಸರೂ ನನಗೆ ಅಸಹ್ಯವೆನಿಸತೊಡಗಿತು."

ಕ್ಯಾಥರೀನ ಗದ್ಗದ ಕಂಠದಿಂದ ಕೊನೆಯ ಮಾತುಗಳನ್ನು ಹೇಳಿ ಸುಮ್ಮನಾದಳು.

ನನಗೂ ತುಂಬಾ ಆಶ್ಚರ್ಯವಾಯಿತು. "ಯಾರದು ನಿಜ?" ಎಂಬುದು ತಿಳಿಯದೇ ಪೇಚಾಡತೊಡಗಿದೆ. ಪ್ರತಿಯೊಬ್ಬ ಮನುಷ್ಯ ತಾನು ಮಾಡಿದುದೇ ಸರಿ ಎಂದು ತಿಳಿದುಕೊಂಡಂತಾಗಿತ್ತು. ಯಾರನ್ನು ನಂಬ ಬೇಕು ಎಂಬುದು ನನಗೆ ಆಗ ಹೊಳೆಯದೇ ಹೋಯಿತು. ನಾನು ತಡಬಡಿ ಸುತ್ತ ಕೇಳಿದೆ.

"ಕ್ಯಾಥರೀನ್, ನನಗೊಂದೂ ತೋಚದಂತಾಗಿದೆ."

"ಏನು?"

"ಇಂದು ನಿನಗೆ ಭವಿಷ್ಯ ಹೇಳಿದೆನಲ್ಲವೇ?"

"ಹೌದು."

"ಹೇಳಿದ ಮಾತುಗಳೆಲ್ಲ ಸತ್ಯವಾಗಿದ್ದರೂ— ಹೇಳುವ ರೀತಿ ಸುಳ್ಳಿನ ದಾಗಿತ್ತು."

"ಅಂದರೆ?"

"ಈ ಮೊದಲು ವೇಲಾಯುಧನ್ ನಿನ್ನ ವಿಷಯ ನನ್ನೆದುರು ಆಡಿದ್ದ. ಆದರ ಆಧಾರದ ಮೇಲೆ ನಿನ್ನ ಭವಿಷ್ಯ ಹೇಳಿದ್ದು."

ಕ್ಯಾಥರೀನ ಒಮ್ಮೆಲೆ ಧಬೆಧಬೆಯ ಧ್ವನಿಯಲ್ಲಿ ನಕ್ಕುಬಿಟ್ಟಳು. ಅವಳ ನಗುವನ್ನು ತಡೆಯುತ್ತ ನಾನು ಹೇಳಿದೆ.

" ಆಗ ಹೇಳಿರುವದು ಸುಳ್ಳು ಎಂದು ಈಗ ಸತ್ಯವನ್ನಾಡಿದೆ. ನನಗೆ ಬಿದ್ದಿರುವ ಸಮಸ್ಯೆ ಇನ್ನೊಂದು."

" ಏನು ? "

" ಆತ ಇದೇ ಸಂಗತಿಯನ್ನು ಬೇರೊಂದು ರೀತಿಯಲ್ಲಿ ಹೇಳಿದ. ನೀನು ಇನ್ನೊಂದು ರೀತಿಯಲ್ಲಿ ಹೇಳಿದಿ. ನಡೆದು ಹೋದ ಘಟನೆಗಳಲ್ಲಿ ವ್ಯತ್ಯಾಸ ವಿಲ್ಲದಿದ್ದರೂ ಘಟಿಸುವ ರೀತಿಯಲ್ಲಿ ತುಂಬಾ ವ್ಯತ್ಯಾಸವಿದೆ."

" ನಿಮಗಾವದು ಸರಿ ಎಂದು ಕಾಣುತ್ತದೋ ಅದನ್ನು ನಂಬಿರಿ ".

" ವೇಲಾಯುಧನ್ ಇನ್ನೂ ಒಂದು ಸಂಗತಿಯನ್ನು ಹೇಳಿದ ".

" ಏನದು ? "

" ಅವಳಿಗೆ ಈಗ ನಿಮ್ಮಂತಹರೇ ಗತಿ ಎಂದು ಹೇಳಿದ. ನಿಜವೇ ? "

" ಇನ್ನೆಂದೂ ನಿಮ್ಮ ಮುಂದೆ ಸುಳ್ಳು ಹೇಳಬಾರದೆಂದು ಮಾಡಿರುವೆ. ಆದಕಾಗಿ ಈ ಮಾತನ್ನು ಒಪ್ಪಿಕೊಳ್ಳುವೆ ".

ನಾನು ಆಶ್ಚರ್ಯಚಕಿತನಾಗಿ ಕೇಳಿದೆ.

" ಅಂದರೆ ? "

" ಹಾಗಲ್ಲ. ವೇಶ್ಯಾವೃತ್ತಿಯಲ್ಲ— ಆದರೆ-? "

ಹಗ್ಗವೆಂದು ಹಿಡಿದದ್ದು ಹಾವು ಎಂದು ತಿಳಿದಾಗ ಮನುಷ್ಯ ಬೆಚ್ಚಿ ಬೀಳುವಂತೆ ನಾನು ಬೆಚ್ಚಿಬಿದ್ದೆ. ಅವಳು ತುಂಬಾ ಕಳಕಳಿಯಿಂದ ಬಿನ್ನವಿಸಿ ಕೊಳ್ಳಹತ್ತಿದ್ದಳು.

" ನೀವು ದಯವಿಟ್ಟು ಸಿಟ್ಟಾಗಬಾರದು. ವೇಲಾಯುಧನ್‌ನ ಸೇಡಿನ ಮೇಲಿಂದ ನಾನು ಈ ಕೆಲಸವನ್ನು ಮಾಡಿದ್ದೆ. ಅಂದರೆ ಈ ಪೀಡೆ ತೊಲಗುತ್ತ ದೆಂದು. ಪೀಡೆ ಏನೋ ತೊಲಗಿತು. ಹೊಸದಾಗಿ ಹತ್ತಿದ ಪೀಡೆ ಮಾತ್ರ ತೊಲಗುತ್ತಿಲ್ಲ. ಎಲ್ಲವೂ ಭಯಾನಕವಾಗಿದೆ.

ಭಂಗಾರದ ಡಾಬನ್ನು ಬಡೆಸಿಕೊಂಡ ಹಿತ್ತಾಳಿಯಂತಿದೆ ನನ್ನ ಜೀವನ. ಈ ವೇಲಾಯುಧನ್‌ನನ್ನು ತಪ್ಪಿಸಿಕೊಳ್ಳುವದಕ್ಕಾಗಿ ಇತ್ತೀಚೆ— ಸಾರ್ಜಂಟ

ಡಾಬ್ಸನ್‌ರ ಮೇಲೆ ಪ್ರೀತಿ ಮಾಡಿದೆ— ಆ ಓಡೆ ಇಂದಿಗೂ ನನ್ನ ಬೆನ್ನು ಬಿಟ್ಟಿಲ್ಲ— ದಿನವೂ ೧೧-೧೧½ ಘಂಟೆಗೆ ಕುಡಿದು ನನ್ನಲ್ಲಿ ಬರುತ್ತಾನೆ. ಆತ ನನ್ನೂ ಕಂಡರಾಗದು. ಆದರೆ ಮಾಡುವದೇನು ? ”

ಜಾನಪದ ಕತೆಯಲ್ಲಿಯ ಒಂದು ಅದ್ಭುತ ಕತೆಯನ್ನು ಕೇಳಿದಂತೆ ನನಗೆ ಭಾಸವಾಗತೊಡಗಿತು. ಬೇಗನೆ ಅಲ್ಲಿಂದ ದೂರ ಹೋಗಲು, ಅವಳಿಂದ ದೂರ, ದೂರ ಓಡಿ ಹೋಗಲು ಹವಣಿಸತೊಡಗಿದೆ. ಅದಕ್ಕಾಗಿ ಕಾರಣವನ್ನು ಶೋಧಿಸುತ್ತ ನಾನು ನನ್ನ ಕೈ ಗಡಿಯಾರವನ್ನು ನೋಡಿಕೊಂಡು ಹೇಳಿದೆ.

“ ಅಬ್ಬಾ, ಒಂಬತ್ತೂ ಕಾಲು ಆಯಿತಲ್ಲ ”.

“ ನಡೆಯಿರಿ ಹೋಗುವಾ ” ಎಂದು ಅವಳೆಂದಳು.

ನಾನು ಅವಳನ್ನು ಅವಳ ಮನೆಯಹತ್ತಿರ ಬಿಟ್ಟು ತಿರುಗಿ ಹೊರಡಲು ಸಿದ್ಧನಾದೆ. ತಿರುಗುವ ಮೊದಲು ಸಿಗಾರೇಟನ್ನು ಹೊತ್ತಿಸಬೇಕೆಂದು, ಬಾಯಲ್ಲಿ ಸಿಗಾರೇಟನ್ನು ಇರಿಸಿಕೊಂಡು ಕಡ್ಡೀಪೆಟ್ಟಿಗೆಗಾಗಿ ಜೇಬಿನಲ್ಲಿ ಕೈ ಹಾಕಿದೆ. ಅಲ್ಲಿ ಕಡ್ಡೀಪೆಟ್ಟಿಗೆ ಇರಲಿಲ್ಲ. ಅದನ್ನು ಗಮನಿಸಿದ ಕ್ಯಾಥರೀನ ಒಳಗೆ ಹೋಗಿ ಕಡ್ಡೀಪೆಟ್ಟಿಗೆಯನ್ನು ತಂದಳು. ನಾನು ಅದಕ್ಕೆ ಕೈಯೊಡ್ಡಿದೆ. ಆದರೆ ಅವಳು ಅದನ್ನು ನನ್ನ ಕೈಯಲ್ಲಿ ಕೊಡದೇ ತಾನೇ ಕಡ್ಡಿಯನ್ನು ಕೊರೆದು ನನ್ನ ಸಿಗಾರೇಟನ್ನು ಹೊತ್ತಿಸಿದಳು. ಒಂದು ಜುರುಕಿಯನ್ನು ತೆಗೆದುಕೊಂಡು ಸಿಗಾರೇಟನ್ನು ಕೈಯಲ್ಲಿ ತೆಗೆದುಕೊಂಡೆ. ಮರುಕ್ಷಣವೇ ಕ್ಯಾಥರೀನ ನನ್ನನ್ನು ಬಲವಾಗಿ ಅಪ್ಪಿಕೊಂಡು ಮುದ್ದಿಟ್ಟಳು.

ನಾನು ಸ್ತಂಭೀಭೂತನಾಗಿ ನಿಂತುಬಿಟ್ಟೆ. ಎಲ್ಲಿಯೋ ಭೂಕಂಪವಾದಂತೆ ನಿಸಿತು. ಸುತ್ತಲೂ ನೋಡಿದೆ. ಸುತ್ತಲೂ ಕತ್ತಲು-ತೆಂಗಿನ ಗರಿಗಳ ಸರಸರ ಶಬ್ದದ ಹೊರತು ಮತ್ತಾವ ಸಪ್ಪಳವಿರಲಿಲ್ಲ. ನಾನೇನು ಮಾಡುತ್ತಿರುವನೆಂಬುದರ ಕಲ್ಪನೆ ಬರಲಿಲ್ಲ. ಎದುರಿನಲ್ಲಿ ಕ್ಯಾಥರೀನ ಹಾಗೆಯೇ ನಿಂತುಕೊಂಡಿದ್ದಳು. ಅವಳ ಮುಖಮುದ್ರೆ ಕಾಣುತ್ತಿರಲಿಲ್ಲ. ಅವಳ ದೇಹ ಕಾಣುತ್ತಿತ್ತು ಅವಳ ತುಟಿಗಳು ಕಾಣುತ್ತಿದ್ದವು. ನನ್ನ ತಲೆ ಹುಚ್ಚೆದ್ದು ಗರ್ರನೇ ತಿರುಗತೊಡಗಿತು. ಅವಳನ್ನು ಮುದ್ದಿಡಲಾ? ಅದು ನನ್ನ ತಪ್ಪಲ್ಲ. ಅಪರಾಧವಲ್ಲ. ಛೆ ನೂರಾಎಂಟು ಭಾವನೆಗಳು ಸುಳಿದಾಡತೊಡಗಿದವು. ನಾನು ಯಂತ್ರದ ಬೊಂಬೆಯಂತೆ ನಿಂತುಕೊಂಡಿದ್ದೆ. ಒಂದು ಮನಸ್ಸು ಚೀರುತ್ತಿತ್ತು “ ಹೂಂ

ತಡವೇಕೆ ಅವಳಾಗಿಯೇ ಕೊಡಮಾಡಿದ ಅಧರಾಮೃತ ಸವಿಯಲೇಬೇಕು." ಆ ಹುಚ್ಚು ಮನಸ್ಸಿನ ಅತೃಪ್ತ ವಿಚಾರಗಳಿಗೆ ವಶನಾಗಬೇಕೆನ್ನುವದರಲ್ಲಿ— ವಿವೇಕ ಹಿಂಪಕ್ಕೆ ಜಗ್ಗುತ್ತಿತ್ತು. ಅವಳ ಹತ್ತಿರ ಹೋಗಬೇಕು ಎನ್ನುವಷ್ಟರಲ್ಲಿ ಮನೆಯ ನೆನಪಾಯಿತು. ಮನೆತನದ ನೆನಪಾಯಿತು. ಯಾರೂ ನಮ್ಮ ಮನೆಯಲ್ಲಿ ಈ ಪರಿಗೆ ಇಂಥ ಹೇಯ ಕೃತಿ ಮಾಡಲಿಲ್ಲ. ಅಂಥ ಮನೆತನಕ್ಕೆ ಕಲಂಕ ಹಚ್ಚುವ ಕೆಲಸ ನಾನು ಮಾಡಲೇ. ಛೆ— ಆದರೇನು ವೇಳೆಯೇ ಅಂತಹದಿತ್ತು. ಹುಚ್ಚು ಮನಸ್ಸು ವಿವೇಕವನ್ನು ಜಗ್ಗುತ್ತಿತ್ತು. ನಾನೇನು ಮಾಡುತ್ತಿರುವೆನೆಂಬದು ನನಗೇ ತಿಳಿಯದಾಯಿತು. ಈ ಹಗ್ಗ ಜಗ್ಗಾಟದಲ್ಲಿ ನಾನು ಅವಳನ್ನು ಅಪ್ಪಿ ತುಟಿಯತ್ತ— ಅಷ್ಟರಲ್ಲಿ ಒಂದು ಚಿತ್ರ ಕಣ್ಣೆದುರು ಬಂದಿತು. ಅದೇ ಪ್ರಚಾರ ಚಿತ್ರ. ಅದರ ಒಕ್ಕಣಿಕೆ ನನ್ನ ಕಣ್ಣೆದುರಿನಲ್ಲಿ ತಾಂಡವ ನೃತ್ಯವಾಡತೊಡಗಿದ "This is the face that has kissed several Jap soldiers. Be ware" ಮಹಾ ಭಯಾನಕ ಸ್ವಪ್ನದೊಳಗಿಂದ ಎಚ್ಚತ್ತವನಂತೆ ಅವಳಿಂದ ದೂರ ಸರಿದೆ. ಅವಳಾಗ ಕಣ್ಣು ಮುಚ್ಚಿಕೊಂಡು ನಿಂತುಕೊಂಡಿರಬೇಕು. ಹಾಗೆಯೇ ನಾನು ದೂರ ಸರಿದುಕೊಂಡೆ— ಸ್ವಲ್ಪ ಸಮಯದ ನಂತರ ಅವಳು ಕೇಳಿದಳು.

"Why dont you kiss?" (ಚುಂಬಿಸುವದಿಲ್ಲವೇಕೆ?)

"Excuse me...." (ಕ್ಷಮಿಸು)

ಎಂದವನೇ ಘಟ್ಟಿ ಧೈರ್ಯ ಮಾಡಿ ಹಿಂದಿರುಗಿ ವೇಗವಾಗಿ ಯುನಿಟ್ಟಿನತ್ತ ಹೋದೆ. ಹಾಗೆ ನಡೆಯುವಾಗ ಒಮ್ಮೆಯಾದರೂ ಹಿಂದಿರುಗಿ ನೋಡಲಿಲ್ಲ. ಕ್ಯಾಥರೀನ ಅಲ್ಲಿಯೇ ಎಷ್ಟು ಹೊತ್ತು ನಿಂತಿದ್ದಳೋ ದೇವರೇ ಬಲ್ಲ.

ಯುನಿಟ್ಟಿಗೆ ಬಂದು ನನ್ನ ಮಂಚದ ಮೇಲೆ ಮಲಗಿಕೊಂಡೆ. ನಿದ್ರೆ ಬರಲಿಲ್ಲ. ವಿಚಾರಗಳ ಸುಳಿಯಲ್ಲಿ ಸಿಕ್ಕು ಗಾಸಿಯಾಗುತ್ತಿದ್ದೆ. ನಾನು ಮಾಡಿದ್ದು ಸರಿಯೇ? ಒಂದು ಮನಸ್ಸು 'ಸರಿ' ಎಂದು ಹೇಳುತ್ತಿತ್ತು. ಇನ್ನೊಂದು 'ಸರಿಯಲ್ಲ, ಅವಳಾಗಿ ಕೊಡಮಾಡಿದ ಸಂಪತ್ತನ್ನು ಹೀಗೆ ಧಿಕ್ಕರಿಸಿ ಬರುವದೆಂದರೆ' ಎಂದು ಹೇಳಿ ಕಾಡಿಸುತ್ತಿತ್ತು. ತಲೆ ಒಂದು ಬಗೆಯ ಗುಂಗಿನಿಂದ ಸುಸ್ತಾಗಿದ್ದಿತು. ಎದ್ದವನೇ ಪೆಟ್ಟಿಗೆಯೊಳಗಿಂದ ಬೀರು ಬಾಟಲಿಗಳನ್ನು

ಹೊರತೆಗೆದೆ. ಒಂದೇ ವೇಳೆಗೆ ಎರಡು ಬಾಟಲಿಗಳನ್ನು ಖಾಲಿ ಮಾಡಿದೆ. ಒಂದು ಬಗೆಯ ಉದ್ರೇಕ ನನ್ನನ್ನು ಆವರಿಸಿತು. ಹಾಗೆಯೇ ಮಂಚದಿಂದ ಎದ್ದೆ. ಪುನಃ ಅರಿವೆಗಳನ್ನು ಧರಿಸಿದೆ. ನನಗೆ ತಿಳಿಯದಂತೆ ನನ್ನ ಕಾಲುಗಳು ಕ್ಯಾಥರೀನಳ ಮನೆಯತ್ತ ನನ್ನನ್ನು ಎಳೆದುಕೊಂಡು ನಡೆದವು. ಹುಚ್ಚು ಮನಸ್ಸು ಆಪ್ತ ಸ್ನೇಹಿತನಂತೆ ನನಗೆ ಉಪದೇಶ ಮಾಡತೊಡಗಿತ್ತು. ಅದು ನನ್ನ ತಲೆಯಲ್ಲಿ ಕಟಿಯುತೊಡಗಿತ್ತು. "ಏನಿದೆ ಜಗತ್ತಿನಲ್ಲಿ— ನಾಳೆ ನೀನು ಜೀವಿಸಿ ಇರುವಿ ಎನ್ನುವದು ನಿಶ್ಚಿತವೇ ?— ನಾಳಿನ ಬಗೆಗೆ ನಂಬುಗೆ ಇಲ್ಲ. ಇಂದೇ ತೀರಿಸಿಕೋ. ಪಡಬೇಕಾದ ಸುಖ ಪಡು. ಮೀನ ಮೇಷ ಎಣಿಸ ಬೇಡ. ಮೇಲಾಗಿ ತೊಂದರೆ ಇಲ್ಲದೇ— ತಾನಾಗಿಯೇ ಅವಳು ನಿನ್ನ ಬಳಿಗೆ ಬಂದಿರುವಳು."

ನಾನು ಕೊನೆಯ ನಿರ್ಣಯವನ್ನು ಅಂಗೀಕರಿಸುವ ಪೂರ್ವದಲ್ಲಿಯೇ ನಾನು ಕ್ಯಾಥರೀನಳ ಮನೆಯ ಬಾಗಿಲಿಗೆ ಬಂದು ನಿಂತುಬಿಟ್ಟಿದ್ದೆ. ಅವಿವೇಕ ವಿಜಯದ ಪ್ರತೀಕದಂತೆ ನಾನು ಬಾಗಿಲನ್ನು ಬಡೆದೆ. ಒಂದರೆ ನಿಮಿಷದಲ್ಲಿ ಬಾಗಿಲು ತೆರೆಯಿತು. ಕ್ಯಾಥರೀನಳ ತಾಯಿ ಬಾಗಿಲು ತೆಗೆದು ನಿಂತು ಕೊಂಡಳು.

" ಏನು ? " ಎಂದು ವಿಚಾರಿಸಿದಳು.

" ಬಾಗಿಲಲ್ಲೇ ನಿಂತು ಏನು ? ಎಂದು ಕೇಳುತ್ತೀರಲ್ಲಾ ? ನಾನು ಬಂದಿರುವೆ. ಒಳಗೆ ಕರೆಯುವದಿಲ್ಲವೇ ? "

" ಕ್ಷಮಿಸಿ, ಸಿಟ್ಟಾಗಬೇಡಿ ! "

" ಏನದು ? "

" ಯಾರು ಬೇಕು ನಿಮಗೆ ? "

" ಕ್ಯಾಥರೀನ್ "

" ಈಗಿಲ್ಲ. ಒಳಗಿನ ಕೋಣೆಯಲ್ಲಿ ಮಲಗಿದ್ದಾಳೆ."

" ಅಲ್ಲಿಗೆ ಹೋಗಬೇಕಾಗಿದೆ." ನನ್ನ ಕಂಣುಗಳು ಕೆಂಪಾಗಿದ್ದುವು. ಧ್ವನಿ ಒರಟಾಗತೊಡಗಿತ್ತು.

ಒಂದರೆ ನಿಮಿಷ ಅವಳ ತಾಯಿ ನಸುನಕ್ಕು ಹೇಳಿದಳು—

" ಅಲ್ಲಿ ಈಗ ಹೋಗುವಂತಿಲ್ಲ. "

" ಏಕೆ ? "

" House ful (ಹಾವ್ಸ್ ಫುಲ್) "

ನಾನು ಜರ‍್ರನೆ ಆಕಾಶದಿಂದ ಭೂಮಿಗಿಳಿದೆ. " ಯಾರು ? " ಎಂದು ಕೇಳಿದೆ.

" ಸಾರ್ಜಂಟ ಡಾಬ್ಸನ್ "

ನನಗೆ ಮತ್ತೆ ಹೇಸಿಕೆಯಾಯಿತು. ಅಲ್ಲಿಂದ ಒಂದೇ ಉಸುರಿನಲ್ಲಿ ರಾಜಬೀದಿಗೆ ಬಂದು, ಯುನಿಟ್ಟಿಗೆ ಹೋಗಿ ಬಂದು ಮಲಗಿಕೊಂಡೆ. ಇದೀಗ ನನ್ನಲಿಯೂ ವಿವೇಕ ಕೆಲಸಮಾಡತೊಡಗಿತ್ತು. ಅದು ಸಾರ್ಜಂಟ ಡಾಬ್ಸನ್ ನನ್ನು ಸಾವಿರ ಸಲ ಅಭಿನಂದಿಸಿತು.

ಅಂದು ನನ್ನ– ಅವಳ ಪರಿಚಯದ ಕೊನೆಯ ದಿನವಾಗಿತ್ತು. ಮುಂದೆ ನಾನೆಂದೂ ಅವಳ ಮನೆಗೆ ಕಾಲಿಕ್ಕಲಿಲ್ಲ. ಅವಳೂ ನನಗೆ ಭೆಟ್ಟಿಯಾಗಲಿಲ್ಲ. ಸ್ವಾರಸ್ಯಪೂರ್ಣ ಪ್ರಸಂಗವಾದರೂ ಎಂದೂ ಮರೆಯಲಾಗದಷ್ಟು ಭಯಾನಕ ವಾಗಿತ್ತು.

•

## ಒಂದು ಕುತ್ತು

ನಾವು ಇರುತ್ತಿದ್ದ ಮನೆಯ ಮುಂದುಗಡೆಯಲ್ಲಿಯೇ ಕ್ವಂಟನ್ ಹೊಳೆಯ ಮುಖವಿತ್ತು. ಸಂಗಮ ಸ್ಥಳ ರಮಣೀಯವೆನಿಸುವಂತೆ ಭಯಾನಕವೂ ಎನಿಸುತ್ತದೆ. ಕ್ವಂಟನ್ ಹೊಳೆಯ ಆಚೆ ದಂಡೆಯಲ್ಲಿ ಒಂದು ಹಳ್ಳಿ ಇದ್ದಿತು. ಆ ಹಳ್ಳಿಯಲ್ಲಿದ್ದವರೆಲ್ಲರೂ ಮಲಾಯುಗಳೇ ಆಗಿದ್ದರು. ಆ ಇಡೀ ಹಳ್ಳಿಯಲ್ಲಿ ಇಬ್ಬರು ಮಾತ್ರ ಭಾರತೀಯರಿದ್ದರು. ಮಲಾಯ ಪೂರ್ವದಲ್ಲಿ ಹೇಗಿತ್ತು ಎಂಬುದನ್ನು ನೋಡಬೇಕಿದ್ದರೆ ಆ ಹಳ್ಳಿಗೆ ಹೋಗಬೇಕು, ಪರಕೀಯರ ಸಂಸ್ಕಾರ ಎಳ್ಳಷ್ಟೂ ಆಗದೇ— ಸಂಪೂರ್ಣ ಮಾಲಾಯತನ ಅಲ್ಲಿ ಸಿಗುತ್ತಿತ್ತು. ಎತ್ತರವಾದ ಮನೆಗಳು. ಪ್ರತಿ ಮನೆಗೊಂದು ನಿಚ್ಚಣಿಕೆ, ಆ ನಿಚ್ಚಣಿಕೆಯನ್ನು ಏರಿಯೇ ಮನೆಯಲ್ಲಿ ಪ್ರವೇಶಿಸಬೇಕು. ಅಲ್ಲಿಯ ಹುಡಿಗೆಯರ ಉಡುಪೂ ಹಾಗೆಯೇ, ತಲೆಗೂದಲು ಹರಡಿಕೊಂಡು ಎದೆಗೊಂದು ಅರಿವೆಯನ್ನು ಸುತ್ತಿಕೊಂಡು, ಟೊಂಕಕ್ಕೊಂದು ಸಾರಂಗ ಸುತ್ತಿಕೊಂಡು ಓಡಾಡುವ ದೃಶ್ಯ— ಅಲ್ಲಿ ಪ್ರತಿನಿತ್ಯ ಕಾಣಬಹುದು. ನಾವಿದ್ದ ದಂಡೆಯ ಮೇಲೆ ಒಂದು ಮುರುಕ ಡೋಣಿ ಬಿದ್ದಿತ್ತು. ಅದನ್ನು ನಾವೇ ನಾಲ್ಕೈದು ಜನ ಚೆನ್ನಾಗಿ ರಿಪೇರಿ ಮಾಡಿ ಬಣ್ಣವನ್ನು ಕೊಟ್ಟು ಅದಕ್ಕೆ "WASHED UP" ಎಂದು ನಾಮಕರಣ ಮಾಡಿ ಬಳಸುತ್ತಿದ್ದೆವು. ಹುಟ್ಟು ಹಾಕಿ ಡೋಣಿಯನ್ನು ಆಚೆ ದಂಡೆಗೆ ಶೀಘ್ರವಾಗಿ ಒಯ್ಯುವದರಲ್ಲಿ ನನ್ನಷ್ಟು ನಿಷ್ಣಾತ ಅಲ್ಲಿ ಮತ್ತಾರೂ ಇರಲಿಲ್ಲ. ನನಗೊಂದು ಹಿಡಿತ ಸಿಕ್ಕಿತ್ತು. ಮೊದಲೊಂದೆರಡುದಿನ ಅಂಜಿಕೆ ಎನಿಸಿದರೂ ಮುಂದೆ ಅದೊಂದು ಆಟವೆನಿಸತೊಡಗಿತು. ಆ ಹಳ್ಳಿಯಲ್ಲಿ ಒಂದು ದಿನ ನೃತ್ಯದ ಕಾರ್ಯಕ್ರಮವಿದ್ದಿತು. ನಾವು ೬-೮ ಹವಾಲ್ದಾರರು ಕೂಡಿಕೊಂಡು ಹೋಗುವದು ಎಂದು ನಿರ್ಧರಿಸಿದೆವು. ಅದರಂತೆ ರಾತ್ರಿ ೯ ಘಂಟೆಗೆ ಡೋಣಿಯಲ್ಲಿ ಕುಳಿತು ಹೊರಟೆವು. ಯಥಾಪ್ರಕಾರವಾಗಿ ಹುಟ್ಟನ್ನು ನಾನೇ ಹಾಕುತ್ತಿದ್ದೆ. ಆ ದಂಡೆ ಮುಟ್ಟಿ ನೃತ್ಯ ಸ್ಥಳಕ್ಕೆ ಹೋದೆವು. ಅದೇ ಆಗ ನೃತ್ಯ ಪ್ರಾರಂಭವಾಗಿತ್ತು. ಸುಮಾರು ರಾತ್ರಿ ೧ ಹೊಡೆಯುವ ವರೆಗೂ ನೃತ್ಯಗಳಾದವು. ನೃತ್ಯದ ಆನಂದವನ್ನು ಸವಿದು ಎಲ್ಲರೂ ಪುನಃ ಡೋಣಿಯ

ಹತ್ತಿರ ಬಂದೆವು. ಏನನ್ನೂ ವಿಚಾರಿಸದೇ ಎಲ್ಲರೂ ಡೋಣಿಯನ್ನೇರಿದೆವು. ಸುಮಾರು ಅರ್ಧ ಹೊಳೆಯನ್ನು ದಾಟಿದ್ದೆವೋ ಇಲ್ಲವೋ— ಡೋಣಿಯಲ್ಲಿ ನೀರು ರಭಸದಿಂದ ಪುಟಿಯತೊಡಗಿತು. ನಾನು ಒಳ್ಳೇ ರಭಸದಿಂದ ಹುಟ್ಟನ್ನು ಹಾಕತೊಡಗಿದೆ. ಆದರೆ ನೀರು ಬಹಳ ಜೋರಿನಿಂದ ಒಳಬರತೊಡಗಿತ್ತು. ಡೋಣಿಗೆ ತೂತು ಬಿದ್ದುದು ಖಂಡಿತವಾಯ್ತು. ಆ ತೂತನ್ನು ಶೋಧಿಸುವ ದಕ್ಕಾಗಿ ಎಲ್ಲರೂ ಖಟಪಟಿಯನ್ನು ನಡೆಸಿದರು. ಆದರೆ ಡೋಣಿಯಲ್ಲಿ ಒಂದೂ ವರೇ ಗೇಣು ನೀರು ನಿಂತಿತ್ತಲ್ಲದೇ ಮತ್ತೆ ಹೆಚ್ಚಾಗತೊಡಗಿತ್ತು. ಎಲ್ಲರೂ ದಿಕ್ಕುಗಾಣದವರಂತೆ ಕಂಗೆಟ್ಟು ಕುಳಿತರು. ರಾತ್ರಿಯ ಸಮಯ. ಕತ್ತಲು ಬೇರೆ. ಆಚೆ ದಂಡೆ ಇನ್ನೂ ಒಂದು ಫರ್ಲಾಂಗು ದೂರವಿದ್ದಿತು. ರಾತ್ರಿಯಲ್ಲಿ ಹೊಳೆಯ ನೀರು ಭಯಾನಕವಾಗಿ ಕಾಣುತ್ತಿತ್ತು. ಅನತಿ ದೂರದಲ್ಲಿ ಸಮುದ್ರ. ಭೋರ್ಗ ರೆಯುವ ಸಪ್ಪಳ ಬೇರೆ ರೌದ್ರತೆಯನ್ನು ಹೆಚ್ಚಿಸುತ್ತಿದ್ದಿತು. ಭರತಿಯ ಸಮಯ ಬೇರೆ. ಆಚೆ ಈಚೆ ದಂಡೆಯಮೇಲೆ ಹಬ್ಬಿದ ಉತ್ತುಂಗ ಗಿಡ. ಇಂಥ ಭಯಾ ನಕ ಹಿನ್ನಲೆಯಲ್ಲಿ ಸಿಕ್ಕ ನಮ್ಮ ಪರಿಸ್ಥಿತಿ ಎಂತಹದಿರಬೇಕು ಎಂಬುದನ್ನು ನೀವು ಊಹಿಸಿಯೇ ತಿಳಿದುಕೊಳ್ಳಬೇಕು. ಆದರೆ ಪ್ರಸಂಗ ಜೀವದ ಮೇಲೆ ಬಂದಾಗ ಎಲ್ಲಿಲ್ಲದ ಧೈರ್ಯ ಬಂದುಬಿಡುತ್ತದೆ. ನಾವೆಲ್ಲರೂ ಒಂದು ನಿರ್ಧಾರಕ್ಕೆ ಬಂದೆವು. ಡೋಣಿಯಂತೂ ಮುಳುಗುವದು ನಿಶ್ಚಿತ. ಆದಕಾರಣ ಎಲ್ಲರೂ ಹೊಳೆಯಲ್ಲಿ ಜಿಗಿದು ಈಸುತ್ತ ಆಚೆ ದಂಡೆಯನ್ನು ಮುಟ್ಟಬೇಕು ಎಂದು ನಿರ್ಧರಿಸಿದೆವು. ಆದರಂತೆ ನಾವೆಲ್ಲರೂ ಒಂದು ಸಲ ದಂಡೆಯಿದ್ದ ಬದಿಯನ್ನು ನೋಡಿಕೊಂಡು ಜಿಗಿದು ಕಣ್ಣು ಮುಚ್ಚಿಕೊಂಡು ಈಸತೊಡಗಿದೆವು. ನಾವೆ ಲ್ಲರೂ ಕಣ್ಣು ಮುಚ್ಚಿಕೊಂಡು ಈಸುವದಕ್ಕೆ ಒಂದು ಪ್ರಬಲ ಕಾರಣವಿತ್ತು. ಕಣ್ಣನ್ನು ತೆರೆದು ನೋಡಿದಾಗ ಕಾಣುವ ಭಯಾನಕ ದೃಶ್ಯದಿಂದ ನಮ್ಮ ಧೈರ್ಯವೆಲ್ಲಿ ಉಡುಗಿ ಹೋಗುತ್ತದೋ ಎಂಬ ಭಯ. ಈ ಭೀತಿಯಿಂದ ಎಲ್ಲರೂ ಕಣ್ಣನ್ನು ಮುಚ್ಚಿಕೊಂಡೇ ಈಸಿದೆವು. ಸ್ವಲ್ಪ ಸಮಯದ ನಂತರ ದಂಡೆಯನ್ನು ಮುಟ್ಟಿದೆವು. ದಂಡೆಯನ್ನು ಮುಟ್ಟಿದ ನಂತರ ಎಣಿಸಿ ನೋಡಿ ದೆವು. ದೇವರ ದಯೆಯಿಂದ ಎಲ್ಲರೂ ಸುಖರೂಪವಾಗಿ ದಂಡೆಯನ್ನು ಮುಟ್ಟಿ ದ್ದೆವು. ನಮ್ಮಲ್ಲಿ ಮುಳುಗಿದವರೆಂದರೆ ಡೋಣಿಯೊಂದೇ. ಮರುದಿನ ಬೆಳಿಗ್ಗೆ ಮತ್ತೆ ದಂಡೆಯ ಮೇಲೆ ನಿಂತು ನೋಡಿದೆವು. ಅಂಥ ಹೊಳೆಯಲ್ಲಿ ಈಸಿದೆವು ಎಂಬ ಸಂಗತಿಯನ್ನು ನಾವೇ ನಂಬುವಂತಿರಲಿಲ್ಲ.

ಹಿಂದುಗಡೆಯಿಂದ ತಿಳಿದು ಬಂದಿತು ಈ ಕುತಂತ್ರ ಯಾರದು ಎಂದು. ನಾವು ನೃತ್ಯ ನೋಡುತ್ತಿದ್ದಾಗ ಹಳ್ಳಿಯಲ್ಲಿಯ ಕಿಡಿಗೇಡಿಗಳು ನಮ್ಮ ಡೋಣಿಗೆ ತೂತನ್ನು ಕೊರೆದು ಹಾಗೆಯೇ ಅದನ್ನು ಮುಚ್ಚಿ ಹೋಗಿದ್ದರೆಂಬುದು ತದ ನಂತರ ತಿಳಿಯಿತು. ಕುತ್ತು ಸಣ್ಣದಾಗಿದ್ದರೂ ಜೀವ ಕಳೆದುಕೊಳ್ಳುವ ದಕ್ಕೆ ಸಾಕಾಗಿದ್ದಿತು. ಅಂತೂ ಕುತ್ತಿನಿಂದ ಪಾರಾದುದಕ್ಕೆ ದೇವರನ್ನು ಅಭಿನಂದಿಸಿದೆವು.

## ಜಪಾನಿಗಳ ಸಹವಾಸದಲ್ಲಿ

ನಾವಿದ್ದ ರೂಮಿನ ಎದುರುಗಡೆಯಲ್ಲಿ ಒಂದು ದೊಡ್ಡ ಶೆಡ್ ಇದ್ದಿತು. ಆ ಶೆಡ್ಡಿನಲ್ಲಿ ಜಪಾನಿ ಸಾದಾ ಕೈದಿಗಳಿದ್ದರು. ಅವರೆಲ್ಲರೂ ನಮ್ಮ ವರ್ಕ ಶಾಪಿನಲ್ಲಿ ದುಡಿಯುತ್ತಿದ್ದರು. ಅವರ ಮುಖಂಡ ಮೇಜರ ಓಸಾಕಾ ಎಂಬು ವವನಿದ್ದನು. ಆತನಿಗೆ ಚೂರು ಚಾರು ಇಂಗ್ಲಿಷ ಬರುತ್ತಿದ್ದಿತು. ನಾನು ಸೂಟಿಯ ದಿನಗಳಲ್ಲಿ ಆತನ ಜತೆಯಲ್ಲಿ ಹರಟೆ ಹೊಡೆಯುತ್ತ ಕೂಡ್ರುತ್ತಿದ್ದೆನು. ಅವರ ಶಿಸ್ತು, ಅವರ ಸಂಘಟನೆ, ಆಜ್ಞಾಧಾರಕತ್ವ ಇವೆಲ್ಲಾ ನೋಡಿ ನಾನು ಆಶ್ಚರ್ಯಬಟ್ಟೆನು. ಓಸಾಕಾ ತನ್ನ ಮನೆಯ, ತನ್ನ ದೇಶದ ಹಲವಾರು ಕತೆ ಗಳನ್ನು ಹೇಳುತ್ತಿದ್ದ. ನಾವಿಬ್ಬರೂ ಕೆಲವೇ ದಿನಗಳಲ್ಲಿ ಮಿತ್ರರಾಗಿಬಿಟ್ಟೆವು. ನಾವು ಕ್ವಂಟನ್ ಬಿಡುವ ಪೂರ್ವದಲ್ಲಿ ಆತ, ಬಿದ್ದ ವಿಮಾನಗಳ ತಗಡಿನಿಂದ ಒಂದು ಟ್ರಂಕನ್ನು ತಯಾರಿಸಿ ನನಗೆ ಕಾಣಿಕೆಯಾಗಿ ಕೊಟ್ಟು ಹೇಳಿದ್ದ—

"When you go to India, you remember Osaka."

ಯುದ್ಧದ ಕಾಲಕ್ಕೆ ಆತ್ಯಂತ ವೈರಿಗಳೆನಿಸಿದ ನಾವು ಈಗ ಆತ್ಯಂತ ಮಿತ್ರರಾಗಿದ್ದೆವು. ನನ್ನನ್ನು ಬೀಳ್ಕೊಡುವಾಗ ಆತನ ಕಣ್ಣಲ್ಲಿ ನೀರೂರಿತ್ತು. ನನಗೂ ಕೆಡಕೆನಿಸಿತ್ತು.

## ಜಂಗಲ ಟ್ರೇನಿಂಗಿಗಾಗಿ

ಮಲಾಯಾದಲ್ಲಿ ಕಮ್ಯುನಿಸ್ಟ ಚಟುವಟಿಕೆಗಳು ಹೆಚ್ಚಾಗತೊಡಗಿದ್ದವು. ಕೈಮುಟ್ಟದ ದಟ್ಟ ಕಾಡುಗಳಲ್ಲಿ ಅವಿತುಕೊಂಡು ಭೂಗತ ಚಳುವಳಿಯನ್ನು ಕಮ್ಯುನಿಸ್ಟರು ನಡೆಯಿಸಿದ್ದರು. ಭಯೋತ್ಪಾದಕರ ಚಟುವಟಿಕೆಗಳನ್ನು ತಡೆ

ಗಟ್ಟಲು ಬ್ರಿಟಿಶ ಸರಕಾರ ನಾನಾಪರಿಯಿಂದ ಪ್ರಯತ್ನಿಸತೊಡಗಿತ್ತು. ಅಲ್ಲಿಯ ಸೈನಿಕರಿಗೆ ಜಂಗಲದಲ್ಲಿ ಹೋರಾಡುವ ವಿಶಿಷ್ಟ ತಂತ್ರದ ಪರಿಚಯ ಮಾಡಿ ಕೊಡುವ ಉದ್ದೇಶದಿಂದ, ಕೋಲಾಲಂಪೂರಿನಿಂದ ೧೮ ಮೈಲುಗಳ ಮೇಲಿದ್ದ ದುಸಾನತುವಾ ಹಳ್ಳಿಯ ಹತ್ತರ ತರಬೇತಿ ಕೇಂದ್ರವನ್ನು ತೆರೆಯಲಾಯಿತು. Malaya Commond Training Centre, ದುಸಾನ್‌ತುವಾ ಎಂದು ಆ ಕೇಂದ್ರದ ಹೆಸರು. ತರಬೇತಿ ಹೊಂದಲು ಆರಿಸಿದ ಪ್ರಥಮ ಗುಂಪಿನಲ್ಲಿಯೇ ನಾನಿದ್ದೆನು. ಈ ಕೇಂದ್ರದಲ್ಲಿ ಜಪಾನೀ ಸೈನಿಕರಿಂದ (ಯುದ್ಧ ಕೈದಿಗಳು) ಜಂಗಲದಲ್ಲಿ ಯುದ್ಧ ಮಾಡುವ ಬಗೆಯನ್ನು ಕಲಿಸಲಾಗು ತ್ತಿತ್ತು. ಆರು ವಾರಗಳ ವರೆಗೆ ಶಿಕ್ಷಣವನ್ನು ಪಡೆದು ಮರಳಿ ಕ್ವಾಂಟನಕ್ಕೆ ತಲುಪಿದೆವು.

## ಸ್ವದೇಶಾಗಮನ

ಕ್ವಂಟದದಲ್ಲಿ ಮುಂದೆ ಕೆಲವು ತಿಂಗಳಗಳ ವರೆಗೆ ಉಳಿದುಕೊಂಡೆವು. ಭಾರತಕ್ಕೆ ಮರಳಲು ನಮ್ಮ ಯುನಿಟ್ಟಿಗೆ ಆಜ್ಞೆ ಬಂದಿತು. ಇಡೀ ಯುನಿಟ್ಟು ಪೋರ್ಟ ಸ್ವಿಟೆನ್‌ಹ್ಯಾಮಕ್ಕೆ ಪ್ರಯಾಣ ಮಾಡಿತು. ಅಲ್ಲಿಂದ ಯುನಿಟ್ಟು ಹಡಗವನ್ನೇರಿತು. ೧೯೪೭ ರ ಜನವರಿ ಮಧ್ಯವಿರಬಹುದು. ನಾವು ಮರಳಿ ಸ್ವದೇಶಕ್ಕೆ ಬಂದೆವು.

ಅವರು ಹೇಳುತ್ತಿದ್ದ ಕತೆಯನ್ನು ಕೇಳುತ್ತ ಕುಳಿತಿದ್ದೆ. ಅವರು ತಮ್ಮ ಕತೆಯನ್ನು ಹೇಳುವದನ್ನು ನಿಲ್ಲಿಸಿದಾಕ್ಷಣ ನನಗೆ ಎಚ್ಚರು ಮೂಡಿತು. ನಾನು ಕುತೂಹಲಿತನಾಗಿ ಕೇಳುತ್ತಿದ್ದೆ. ನಾನು ಅವರನ್ನು ಒತ್ತಾಯಪಡಿಸಿದೆ—

" ಇಲ್ಲಿಗೇ ಮುಗಿಸಿದಿರಲ್ಲ ? "

" ಹೌದು. "

" ಮುಂದಿನ ವಿಷಯ ? "

" ಅದರಲ್ಲಿ ಹೇಳುವಂಥ ಮಹತ್ವದ ವಿಷಯಗಳೂ ಇಲ್ಲ. ಮೇಲಾಗಿ ನನಗಿನ್ನು ಊರಿಗೆ ಹೊರಡಲೇಬೇಕು."

" ಬಹಳ ಉಪಕಾರವಾಯಿತು. "

" ಆ ಮಾತನ್ನು ನಾನು ಹೇಳಬೇಕು. ನಿಮ್ಮ ಉಪಕಾರವೇ ತುಂಬಾ ಆಗಿದೆ. ನನಗೆ ೧೨ ದಿನಗಳ ವರೆಗೆ ಊಟಕ್ಕೆ ಹಾಕಿದಿರಿ. ಥ್ಯಾಂಕ್ಸ, ಪರಿಚಯವಿರಲಿ."

ಆ ಸೈನಿಕ ಹೊರಡಲು ಎದ್ದು ನಿಂತನು. ನಾನು ಕೃತಜ್ಞತೆಯಿಂದ ನಮಸ್ಕರಿಸಿದೆ. ಆ ಸೈನಿಕನೂ ಪ್ರತಿಯಾಗಿ ನಮಸ್ಕರಿಸಿ ಹೊರಟು ಹೋದನು. ಅವನು ಕಾಣೆಯಾಗುವವರೆಗೂ ನಾನು ಅವನತ್ತಲೇ ನೋಡುತ್ತಿದ್ದೆ.

---

# ಭಾರತೀಯ ಸೈನ್ಯಖಾತೆಯ ಜನ್ಮೇತಿಹಾಸ

ಭಾರತದ ಪ್ರಥಮ ಸ್ವಾತಂತ್ರ್ಯಯುದ್ಧ ಅಥವಾ 'ಸಿಪಾಯಿಗಳ ಬಂಡಾಯ' ನಡೆದು, ಇಂದಿಗೆ ನೂರು ವರುಷಗಳು ಸಂದಿದುವು. ಆ ಸಂಗ್ರಾಮದಲ್ಲಿ ಅಂದಿನ ಸೈನ್ಯಖಾತೆಯ ಸಿಪಾಯಿಗಳು ಹೆಚ್ಚಾಗಿ ಭಾಗವಹಿಸಿದ್ದುದರಿಂದಲೂ— ಅದು ಅಯಶಸ್ವಿಯಾಗಿದ್ದುದರ ಮೂಲಕವಾಗಿಯೂ, ಅದನ್ನು ಕೆಲವರು 'ಸಿಪಾಯಿಗಳ ಬಂಡಾಯ (Sepoy's Mutiny)' ಎಂದೇ ಕರೆದರು. ಅದು ಬಂಡಾಯವೇ ಅಥವಾ ಸ್ವಾತಂತ್ರ್ಯ ಸಂಗ್ರಾಮವೇ ?— ಇದರ ಬಗೆಗೆ ಇನ್ನೂ ಸಾಕಷ್ಟು ಭಿನ್ನಾಭಿಪ್ರಾಯಗಳಿವೆ. 'ಸಮಗ್ರ ಭಾರತೀಯ ದೃಷ್ಟಿ ಆ ಹೋರಾಟಗಾರರಲ್ಲಿ ಮೂಡಿರಲಿಲ್ಲವಾದುದರಿಂದಲೂ, ಕೆಲವು ಅಸಂತುಷ್ಟ ರಾಜರುಗಳ ಕೈವಾಡದಿಂದ–ಮತ್ತು ಸೈನ್ಯಖಾತೆಯಲ್ಲಿಯ ಧಾರ್ಮಿಕ ಭಾವನೆಗಳ ನೋವಿಗೀಡಾಗಿ ನೊಂದ ಮನಸ್ಸಿನ ಸೈನಿಕರ ಅವ್ಯವಸ್ಥಿತ ಪ್ರತೀಕಾರಗಳ ಮೂಲಕ ಅದು ನಡೆದುದರಿಂದಲೂ, ಅದನ್ನು ಸ್ವಾತಂತ್ರ್ಯ ಸಂಗ್ರಾಮವೆಂದು ಕರೆಯಲಾಗದು !' ಎಂದು ಕೆಲವರ ಮತವಾದರೆ ಮತ್ತೆ ಕೆಲವರು 'ಆ ಹೋರಾಟ ನಡೆಸಿದವರಲ್ಲಿಯ ಮೂಲಉದ್ದೇಶ ಪರಕೀಯ ಆಡಳಿತಗಾರರನ್ನು ಹೊರಗೆ ಓಡಿಸುವುದೇ ಆಗಿದ್ದುದರಿಂದ, ಅದು ಸ್ವಾತಂತ್ರ್ಯ ಸಂಗ್ರಾಮವೇ !' ಎಂದು ಅಭಿಪ್ರಾಯ ಪಡುತ್ತಾರೆ, ಅದೇನೇ ಇರಲಿ, ಅಂದಿನ ಸೈನ್ಯಖಾತೆಯ ಸೈನಿಕರು ಈ ಹೋರಾಟದ ಬೆನ್ನೆಲುಬು ಆಗಿದ್ದರೆಂಬುದು ನಿರ್ವಿವಾದ.

೧೮೫೭ ರಲ್ಲಿ ಈ ಹೋರಾಟ ನಡೆಯಿತೆಂಬ ಮಾತನ್ನು ಗಮನಿಸಿದಾಗ, ಇದಕ್ಕೂ ಪೂರ್ವದಲ್ಲಿಯೆ ಈ ಸೈನ್ಯಖಾತೆ ಅಸ್ತಿತ್ವದಲ್ಲಿ ಇದ್ದಿತೆಂಬುದು ಖಂಡಿತ. ಸೈನ್ಯಖಾತೆಯ ಹುಟ್ಟಿನ ಕತೆಯೂ ಬಹು ಮೋಜಿನದಾಗಿದೆ.

೧೭೪೮ರ ಜನವರಿ ತಿಂಗಳಲ್ಲಿ— ಈಸ್ಟ್ ಇಂಡಿಯಾ ಕಂಪನಿಯ ಮೇಜರ್ ಸ್ಟ್ರಿಂಜರ್ ಲಾರೆನ್ಸ್(Stringer lawrence) ಎಂಬವನು ಮೊತ್ತ ಮೊದಲಿಗೆ ಭಾರತೀಯರ ಸೈನ್ಯಪಡೆಯನ್ನು ಮದ್ರಾಸಿನಲ್ಲಿ ನಿರ್ಮಿಸಿದನು. ಅದೇ ಕಾಲದಲ್ಲಿ, ಭಾರತದಲ್ಲಿ ಫ್ರೆಂಚರೂ ವಸಾಹತಿಗಾಗಿ ವಿಶ್ವಪ್ರಯತ್ನ ನಡೆಸಿದ್ದರು. ಇಂಗ್ಲೀಷರೂ ಅವರ ಕಡುವೈರಿಗಳಾಗಿದ್ದರು. ಇಂಗ್ಲೆಂಡಿನಿಂದ

ಇಂಗ್ಲಿಷ್ ಸೈನಿಕರದೊಂದು ಬಟಾಲಿಯನ್, **ಅಡ್ಮಿರಲ್ ಬೊಸ್ಕಾವೆನ್** ಎಂಬವನ ನೇತೃತ್ವದಲ್ಲಿ ಭಾರತಕ್ಕೆ ಬಂದು ಇಲ್ಲಿ ಹೊಸದಾಗಿ ನಿರ್ಮಾಣ ಗೊಂಡ ಭಾರತೀಯ ಸೈನ್ಯದ ತುಕುಡಿಗೆಯುದ್ಧ ಶಿಕ್ಷಣವನ್ನು ಕೊಟ್ಟಿತು. ಪಾಂಡಿ ಚೇರಿಯ ಸಲುವಾಗಿ ಇಬ್ಬಣದವರಲ್ಲಿಯೂ ನಡೆದ ಕಾಳಗದಲ್ಲಿ ಫ್ರೆಂಚರು ವಿಜ ಯಿಗಳಾದರು; ಇಂಗ್ಲಿಷರು ಸೋತರು. ಹೊಸದಾಗಿ ನಿರ್ಮಾಣಗೊಂಡ ಭಾರ ತೀಯ ಸೈನ್ಯಪಡೆಯಿಂದ ತರಬೇತಿಯ ಕೊರತೆಯ ಮೂಲಕ-ಉಪಯೋಗ ಸಾಕಷ್ಟು ಆಗಲಿಲ್ಲವಲ್ಲ !-ಎಂದು ಕಂಪನಿ ಸರಕಾರ ಕೊರಗಿತು. ಈ ಯುದ್ಧದ ಮೂಲಕ ಮದ್ರಾಸು ಅವರ ಕೈ ಬಿಟ್ಟಿತು. ಫ್ರೆಂಚರು ಬಲಶಾಲಿಗಳಾದರು. ಆದರೆ ಯುರೋಪಿನಲ್ಲಿ ನಡೆದ ಇಂಗ್ಲಂಡ್-ಫ್ರಾನ್ಸ್ ಯುದ್ಧವು ಮುಕ್ತಾಯ ಗೊಂಡದ್ದರಿಂದ, ಮದ್ರಾಸು ಮರಳಿ ಕಂಪನಿ ಸರಕಾರದ ವಶಕ್ಕೆ ಬಂದಿತು.

೧೭೫೪ ರಲ್ಲಿ ಸೈನ್ಯಜಾತೆಯ ಇತಿಹಾಸದಲ್ಲಿ ಒಂದು ಹೊಸ ಘಟನೆ ಘಟಿ ಸಿತು. ಆಗ ಕೆಲವೊಂದು ಆಕ್ರಮಿತ ಪ್ರದೇಶದಲ್ಲಿ ಮಾತ್ರ ಕಂಪನಿಸರಕಾರ, ತಾನು ತನ್ನ ವೆಚ್ಚದಿಂದ ನಡೆಸಿದ ಸೈನ್ಯಪಡೆಯನ್ನು ಇರಿಸಿತ್ತು; ಆದರೆ ೧೭೫೪ ರಲ್ಲಿ ಇಂಗ್ಲಂಡಿನಿಂದ ಬ್ರಿಟಿಶ್ ಸರಕಾರದ ಸೈನ್ಯಪಡೆ "ಡೋರಸೆಟ್ ರೆಜಿಮೆಂಟ" ಕಂಪನೀ ಸರಕಾರದ ನೆರವಿಗಾಗಿ ಬಂದಿಳಿಯಿತು. ಮುಂದೆ ಮೂರೇ ವರುಷಗಳ ನಂತರ ನಡೆದ ಪ್ಲಾಸೀ ಕದನ (೧೭೫೭) ಎಲ್ಲರಿಗೂ ತಿಳಿದ ವಿಷಯ. ಕಂಪನಿ ಸರಕಾರ ನಿರ್ಮಿಸಿದ ಬಿಳಿಯ ಸೈನಿಕರ ಪಡೆ, ಭಾರತೀಯ ಸೈನ್ಯಪಡೆ ಮತ್ತು ಇಂಗ್ಲಂಡ್ ಸರಕಾರದ ಒಂದು ರೆಜಿಮೆಂಟು (೩೫೦ ಸೈನಿಕರು) ಈ ಮೂರೂ ಪಡೆಗಳ ಮೇಲಧಿಕಾರಿಯಾಗಿ ರಾಬರ್ಟ್ ಕ್ಲೈವನೇ ನಿಂತುಕೊಂಡು, ಪ್ಲಾಸೀ ಕದನವನ್ನು ನಡೆಸಿದ. ಆಗ ಕಂಪನೀ ಸರಕಾರದ ಬಿಳಿಯರ ಪಡೆಯಲ್ಲಿಯ ೮೦೦ ಸೈನಿಕರು, ಭಾರತೀಯ ಸೈನ್ಯಪಡೆಯಲ್ಲಿಯ ೧೦೦೦ ಸೈನಿಕರು, ಹಾಗೂ ಡೋರ್‌ಸೆಟ್ ರೆಜಿಮೆಂಟಿನ ೩೫೦ ಸೈನಿಕರು, ಹೀಗೆ ೩೫೫೦ ಸೈನಿಕರು ಕಂಪನೀ ಸರಕಾರದ ಪರವಾಗಿ ಹೋರಾಡಿದರು. ಪ್ಲಾಸೀಕದನದಲ್ಲಿ ದೊರೆತ ವಿಜಯ ದಿಂದ ಕಂಪನಿ ಸರಕಾರ ಭಾರತದಲ್ಲಿ ಭದ್ರವಾಗಿ ತಳವೂರಿತು. ಈ ಯುದ್ಧ ನಡೆವ ಮೊದಲೇ ಕ್ಲೈವನು ಬಂಗಾಲದಲ್ಲಿ ಮತ್ತೊಂದು ಭಾರತೀಯ ಸೈನ್ಯ ಪಡೆಯನ್ನು ನಿರ್ಮಿಸಿದ. ಆ ಪಡೆಯ ಹೆಸರು— "The first regiment of bengal infantry" ( ದಿ ಫರ್ಸ್ಟ ರೆಜಿಮೆಂಟ ಆಫ್ ಬೆಂಗಾಲ ಇನ್ ಫಂಟ್ರಿ ) ಎಂದು ಅದರ ನಾಮಕರಣ ಮಾಡಿದ್ದರೂ ಆ ಪಡೆಯಲ್ಲಿ ಕೇವಲ

ಕೈ ಬೆರಳಿನಿಂದೆ ಎಣಿಸುವಷ್ಟು ಬಂಗಾಲಿಗಳಿದ್ದರು. ಬಂಗಾಲದಲ್ಲಿ ಈ ಪಡೆಯು ನಿರ್ಮಾಣವಾದುದರ ಮೂಲಕ ಇದಕ್ಕೆ ಆ ಹೆಸರನ್ನು ಕೊಡಲಾಯಿತು. ಆ ಪಡೆಯಲ್ಲಿ ಪಠಾಣರು, ಜಾಟರು, ರಜಪೂತರು ಮತ್ತು ಒಬ್ಬರೋ ಇಬ್ಬರೋ ಬ್ರಾಹ್ಮಣರು-ಇದ್ದರು. ಮಹಮ್ಮದಿಯ ಸೈನಿಕರು ಮಾತ್ರ ಬಹುಸಂಖ್ಯಾಕರ ರಿದ್ದರು. ಬಂಗಾಲದಲ್ಲಿ ಪಠಾಣರಾಗಲೀ ರಾಜಪೂತರಾಗಲೀ ಜಾಟರಾಗಲಿ ಹೇಗೆ ಸೈನಿಕರಾಗಿ ದೊರೆತರೆಂಬುದು ಸಂದೇಹ ಬರುವಂತಿದೆ; ಆದರೆ ಈ ಪಡೆ ಯಲ್ಲಿ ಸೇರಿದವರೆಲ್ಲ ಒಂದಾನೊಂದು ಸಮಯ ಮೊಗಲರ ಸೈನ್ಯಖಾತೆಯಲ್ಲಿ ಇದ್ದುಕೊಂಡು ಬಂಗಾಲದತ್ತ ಬಂದವರೇ ಆಗಿದ್ದರು. ಮೊಗಲ ಸೈನಿಕರಾಗಿ ಬಂಗಾಲಕ್ಕೆ ಬಂದು, ಅನೇಕ ಕಾರಣಗಳಿಗಾಗಿ ಮೊಗಲ ಪಡೆಯನ್ನು ತ್ಯಜಿಸಿ ದವರಿವರು. ಈ ಪಡೆಯ ಸೈನಿಕರಿಗಾಗಿ ಸಮವಸ್ತ್ರಗಳನ್ನು ಕೊಡಲಾಯಿತು. ಕವಾಯತನ್ನು ಕಲಿಸಿಯಾಯಿತು. ಈ ಪಡೆಯ ಮೇಲಿದ್ದ ಅಧಿಕಾರದ ಸ್ಥಳ ಗಳಲ್ಲಿ ಬಿಳಿಯರೇ ಇರುತ್ತಿದ್ದರು. ಪ್ಲಾಸೀಕಾಳೆಗದಲ್ಲಿ ಈ ಪಡೆಯೂ ಸಾಕಷ್ಟು ಕೆಲಸವನ್ನು ಮಾಡಿತು. ಈ ಯುದ್ಧದಲ್ಲಿ ಕಂಪನಿ ಸರಕಾರಕ್ಕೆ ತಟ್ಟಿದ ಹಾನಿ ಕೆಳಗೆ ವಿವರಿಸಿದಂತಿದೆ.

ಕಾಳಗದಲ್ಲಿ ಸತ್ತವರು— ೨ ಇಂಗ್ಲಿಷರು
೧೬ ಭಾರತೀಯರು

ಗಾಯಗೊಂಡವರು— ೧೩ ಇಂಗ್ಲಿಷರು
೩೬ ಭಾರತೀಯರು

ಅದರೆ ಪ್ರತಿಪಕ್ಷದಲ್ಲಿ ಸಾಕಷ್ಟು ಹಾನಿಯಾಗಿದೆ.

೧೭೬೪ ರಲ್ಲಿ ಈ ಭಾರತೀಯ ಸೈನ್ಯಖಾತೆಯಲ್ಲಿ ಬಂಡು ನಡೆಯಿತು. ಆ ದೃಷ್ಟಿಯಿಂದ ೧೮೫೭ ರಲ್ಲಿ ನಡೆದ ಬಂಡು ಮೊದಲನೆಯ ಬಂಡಲ್ಲ:— ಎರ ಡನೆಯ ಬಂಡೇ ಎಂದು ಕರೆಯಬೇಕಾಗುತ್ತದೆ. ೧೭೬೫ ರಲ್ಲಿ ಭಾರತೀಯ ಸೈನ್ಯಪಡೆಗಳ ವ್ಯಾಪ್ತಿ ಸಾಕಷ್ಟಾಗದಿದ್ದುದರ ಮೂಲಕವಾಗಿಯೂ ಮತ್ತು ಆಗಿನ ಸೈನಿಕರಿಗೆ ಇನ್ನಿತರ ರಾಜರ ಸಹಕಾರವಿರದುದರಿಂದಲೂ— ಆ ಬಂಡಿಗೆ ಭಾರತದ ಇತಿಹಾಸದಲ್ಲಿ, ಸ್ಥಳ ಸಿಕ್ಕದೆ ಹೋಯಿತು. ಆ ಬಂಡು ನಡೆದು ಹೋಗಿ ಪುನಃ ಶಾಂತಿ ಪ್ರಸ್ಥಾಪಿಸಿದ ನಂತರ— ಸೈನ್ಯಖಾತೆಯಲ್ಲಿ ಪ್ರತಿಜ್ಞಾವಿಧಿ

ಜಾರಿಯಲ್ಲಿ ಬಂದಿತು. ಆಗಿನ ಪ್ರತಿಜ್ಞಾ ಪತ್ರ ಹೇಗಿದ್ದಿತೆಂಬುದನ್ನು ಅವಲೋಕಿಸಿರಿ :

"I........ do swear to serve the Honourable Company faithfully and truly against all their enemies while I continue to receive their pay and eat their salt. I do swear to obey all the orders I may receive from my commanders and officers, never to forsake, abandon my Colours, or turn my back to my enemies, and that I will in all things behave myself like a good and faithful sepoy in perfect obedience at all times to the rules and customs of war."

(ಕಂಪನಿ ಸರಕಾರದಿಂದ ನನಗೆ ಸಂಬಳವು ಸಲ್ಲುವ ವರೆಗೆ ಮತ್ತು ಅವರ ಉಪ್ಪನ್ನು ಉಣ್ಣುವ ವರೆಗೆ, ಅವರ ಶತ್ರುಗಳಿಗೆ ಎದುರಾಳಿಯಾಗಿ ಹೋರಾಡಿಯೂ, ನಿಷ್ಠೆಯಿಂದಲೂ ವಿಶ್ವಾಸಪೂರ್ವಕವಾಗಿಯೂ ಸನ್ಮಾನ್ಯ ಕಂಪನಿ ಸರಕಾರದ ಸೇವೆಯನ್ನು ಮಾಡುವೆನೆಂದು ಪ್ರತಿಜ್ಞೆಯನ್ನು ಮಾಡುವೆನು. ವರಿಷ್ಠರ ಅಪ್ಪಣೆಗಳನ್ನು ಶಿರಸಾವಹಿಸಿ - ಕರ್ತವ್ಯ ಪರಾಂಙ್ಮುಖನಾಗದೆ- ಶತ್ರುಗಳಿಗೆ ಬೆನ್ನನ್ನು ತೋರಿಸದೆ, ಯುದ್ಧದ ಕಾಯಿದೆ-ಕಾನೂನುಗಳಿಗೆ ಬದ್ಧನಾಗಿ ವರ್ತಿಸುವೆನು.)

ಮುಂದೆ ೧೭೬೬ ರಲ್ಲಿ ಸೈನ್ಯ ಖಾತೆಯ ಆಡಳಿತದ ದೃಷ್ಟಿಯಿಂದ ಲಿಖಿತ ಕಾಯಿದೆ-ಕಾನೂನುಗಳು ಜಾರಿಯಲ್ಲಿ ಬಂದುವು. ("Military Regulations") ಈ ಮಿಲ್ಟ್ರಿ ರೆಗೂಲೇಶನ್ ಪುಸ್ತಕದಲ್ಲಿ ಸೈನ್ಯ ಖಾತೆಗಾಗಿ ಕೇವಲ ಮುಹಮ್ಮದೀಯರನ್ನಾಗಲಿ, ರಜಪೂತರನ್ನಾಗಲಿ— ತೆಗೆದುಕೊಳ್ಳಬೇಕೆಂದು ಸೂಚನೆಗಳಿವೆ.

ಬರಬರುತ್ತ ಈ ಸೈನ್ಯಪಡೆಗಳು ದ್ವಿಗುಣಿತವಾಗುತ್ತ ನಡೆದವು. ಕಂಪನಿ ಸರಕಾರವು ಮದ್ರಾಸಿನಲ್ಲಿ ಮುಖ್ಯ ಕಚೇರಿಯನ್ನು ಮಾಡಿಕೊಂಡುದರ ಮೂಲಕ, ಮದ್ರಾಸಿನಲ್ಲಿ ನಿರ್ಮಾಣಗೊಂಡ ಅನೇಕ ಪಡೆಗಳಿಗೆ " ಕರ್ನಾಟಕ ರೆಜಿಮೆಂಟ್ " ಎಂದೇ ನಾಮಕರಣಮಾಡಿದ್ದರು. ೧೭೭೯ ರಲ್ಲಿ ಒಂದು

ರೆಜಿಮೆಂಟನ್ನು ಆಗಿನ ಬ್ರಿಗೇಡಿಯರ್ ಜನರಲ್ ಸ್ಮಿಥರು ತಪಾಸಿಸಿ, ತಮ್ಮ ರಿಪೋರ್ಟನ್ನು ಬರೆದಿಟ್ಟಿದ್ದಾರೆ. ಆ ರಿಪೋರ್ಟಿನ ತಾರೀಖು ೨೦ ಜಾನ್ಯುವರಿ ೧೭೭೧. ಆ ರೆಜಿಮೆಂಟಿನ ಹೆಸರು "10th Regiment, Madras native infantry ಎಂದಿದ್ದಿತು. ಅದು ತ್ರಿಚನಾಪಲ್ಲಿಯಲ್ಲಿ ಪಾಳೆಯ ಹಾಕಿತ್ತು. ಈ ಪಡೆಯ ಮುಖ್ಯಾಧಿಕಾರಿ ಕ್ಯಾಪ್ಟನ್ ಥಾಮಸ್ ಬ್ರೂಸ್ ಎಂಬುವವನಿದ್ದ. ಬ್ರಿಗೇಡಿಯರ್ ಜನರಲ್ ಸ್ಮಿಥರ ರಿಪೋರ್ಟಿನ ಭಾಷಾಂತರ ಭಾಗವನ್ನು ಅವಗಾಹನೆಗಾಗಿ ಕೆಳಗೆ ಕೊಟ್ಟಿದೆ :

| | | |
|---|---|---|
| (ಸಶಸ್ತ್ರ) ಸೈನಿಕರ ಹಾಜರಿ | — | ೮೪೮ |
| ಡ್ಯೂಟಿಯ ಮೇಲಿದ್ದವರು | — | ೧೨೨ |
| ಅಜಾರಿ | — | ೫೯ |
| ಅಜಾರಿಯಿಂದ ಗೈರುಹಾಜರು | — | ೭ |
| ರಜೆಯಮೇಲೆ | — | ೨ |
| | ಒಟ್ಟು | ೧೦೫೬ |

ಶರಾ—

ಬ್ರಿಟಿಶ್ ಅಧಿಕಾರಿಗಳು:— ಆಧುನಿಕ ಶಸ್ತ್ರಾಸ್ತ್ರಗಳಿಂದ ಸುಸಜ್ಜಿತ ಅಧಿಕಾರಿಗಳಿದ್ದಾರೆ. ಸಲ್ಯೂಟನ್ನು ಚೆನ್ನಾಗಿ ಮಾಡುತ್ತಾರೆ. ಸಮವಸ್ತ್ರಗಳನ್ನು ಧರಿಸಿರುತ್ತಾರೆ. ಯಾವಾಗಲೂ ಕೆಲಸಕ್ಕೆ ಸನ್ನದ್ಧರಾಗಿರುತ್ತಾರೆ. ಕೆಲವು ಅಧಿಕಾರಿಗಳು ತೀರ ಚಿಕ್ಕವರಿರುತ್ತಾರೆ. ಆದರೆ ಒಳ್ಳೆ ಕ್ರಿಯಾವಂತರಿದ್ದಾರೆ.

ಭಾರತೀಯ ಅಧಿಕಾರಿಗಳು:— ಆಧುನಿಕ ಶಸ್ತ್ರಾಸ್ತ್ರಗಳನ್ನು ಧರಿಸುವುದಿಲ್ಲ. ಕತ್ತಿಯನ್ನು ತಿರುವುತ್ತಾರೆ. ಸಮವಸ್ತ್ರಗಳನ್ನು ಧರಿಸುತ್ತಾರೆ. ಮುಖ್ಯ ಅಧಿಕಾರಿ ತನ್ನ ಕೆಲಸದಲ್ಲಿ ಒಳ್ಳೆ ನುರಿತವನಿದ್ದಾನೆ. ಒಟ್ಟಿನಮೇಲೆ ಸ್ಥಿತಿ ಉತ್ತಮವಾಗಿದೆ.

ಸಾರ್ಜಂಟ್ಸ್:— ನೀಟಾಗಿದ್ದಾರೆ.

ಸಿಪಾಯಿಗಳು:— ಪ್ರಮಾಣಬದ್ಧರಾಗಿದ್ದಾರೆ, ಕೆಲವೊಂದು ಸಿಪಾಯಿಗಳು ಮಾತ್ರ ಕುಳ್ಳರಾಗಿದ್ದಾರೆ. ಉತ್ತಮ ರೀತಿಯಲ್ಲಿ ಪರೇಡ ಮಾಡುತ್ತಾರೆ.

ಹವಾಲದಾರರ ಕೆಲಸ ಸಮಾಧಾನಕರವಾಗಿದೆ. ಬ್ಯಾಂಡಿನವರು ಅವ್ಯವಸ್ಥಿತ ವಾಗಿ ಬಾರಿಸುತ್ತಾರೆ.

ಹೊಸದಾಗಿ ಭರತಿಯಾದವರು:— ಮುಂದೆ ಒಳ್ಳೆಯ ಸೈನಿಕರಾಗುವ ರೆಂಬ ಭರವಸೆ ಇದೆ. ಬಟಾಲಿಯನ್ ಇವರಿಂದ ಸುಧಾರಿಸಲೂಬಹುದು.

ಸುಮಾರು ೧೭೭ ವರುಷಗಳ ಹಿಂದಿನ ಈ ರಿಪೋರ್ಟಿನ ಮೇಲಿಂದ ಅಂದಿನ ಭಾರತೀಯ ಸೈನ್ಯದಳ ಹೇಗಿದ್ದಿತೆಂಬುದನ್ನು ಊಹಿಸಬಹುದಾಗಿದೆ.

ಪ್ಲಾಸಿ, ಪಾಟ್ನಾ, ಬಕ್ಸಾರ ಕಾಳಗಗಳಲ್ಲಿಯೂ, ಅಲ್ಹಾಬಾದ ರೋಹಿಲ ಖಂಡ, ಗ್ವಾಲೇರ, ಮುಂತಾದ ಕೋಟೆ–ಕೊತ್ತಲಗಳನ್ನು ವಶಪಡಿಸಿಕೊಳ್ಳುವು ದರಲ್ಲಿಯೂ ಈ ಪಡೆಗಳ ಸಹಾಯವನ್ನು ಕಂಪನಿ ಸರಕಾರವು ಧಾರಾಳವಾಗಿ ಬಳಸಿಕೊಂಡಿತ್ತು. ಶ್ರೀರಂಗ ಪಟ್ಟಣದ ಯುದ್ಧದಲ್ಲಿಯೂ ಕಂಪನಿ ಸರಕಾರ ಈ ಪಡೆಗಳನ್ನು ಉಪಯೋಗಿಸಿತು. (೧೭೯೯)

೧೭೪೪ ರಿಂದ ೧೮೦೦ರ ವರೆಗೆ ಸೈನ್ಯಖಾತೆಯ ಇತಿಹಾಸದ ಒಂದು ಘಟ್ಟ ಮುಗಿದಂತಾಯಿತು.

ಮುಂದೆ ೧೯ ನೆಯ ಶತಮಾನದ ಪ್ರಾರಂಭದಲ್ಲಿ ಯುರೋಪದಲ್ಲಿ ನೆಪೋಲಿಯನ್ ಯುದ್ಧಗಳು ನಡೆದುವು. ಆದರೆ ಆ ಯುದ್ಧಗಳ ಪರಿಣಾಮ ಭಾರತದಲ್ಲಿಯ ಈ ಪಡೆಗಳ ಮೇಲಾಗಲಿಲ್ಲವಾದರೂ, ಈ ಭಾರತೀಯ ಪಡೆ ಗಳನ್ನು ೪ ಸಲ ಹಿಂದುಸ್ಥಾನದ ಹೊರಗೆ ಯುದ್ಧಕ್ಕಾಗಿ ಕರೆದೊಯ್ಯಲಾಯಿತು. ಭಾರತದಲ್ಲಿ ಇಂಗ್ಲಿಷ ಸರಕಾರವು ಪರಿಪೂರ್ಣವಾಗಿ ಪ್ರಸ್ಥಾಪಿತವಾಗುವ ಪೂರ್ವ ದಲ್ಲಿಯೇ, ಭಾರತೀಯ ಪಡೆಗಳು ಭಾರತದ ಹೊರಗೆ ಬ್ರಿಟಿಶರ ಪರವಾಗಿ ಯುದ್ಧಮಾಡಿ ಜಯಭೇರಿ ಹೊಡೆದ ಸಂಗತಿ ಬಹುಜನರಿಗೆ ಗೊತ್ತಿಲ್ಲ. ಮೊದ ಲನೆಯ ಸಮುದ್ರದಾಚೆಯ ಭಾರತೀಯ ಪಡೆಗಳ ಕಾಳಗವೆಂದರೆ, ೧೮೦೧ ರಲ್ಲಿ ಅಲೆಕ್ಝಾಂಡ್ರಿಯಾಕ್ಕೆ ಹೋದದ್ದು. ೮ ವರುಷಗಳ ತರುವಾಯ, ಅಂದರೆ ೧೮೦೯ ರಲ್ಲಿ, ಮದ್ರಾಸ ಬಟಾಲಿಯನನ್ನು ಮಾರಿಶಸ್‌ಕ್ಕೆ ಕಳಿಸಲಾಯಿತು. ೧೮೧೦ ರಲ್ಲಿ ಮಾರಿಶಸ್ ಫ್ರೇಂಚರಿಂದ ಇಂಗ್ಲಿಷರ ವಶಕ್ಕೆ ಬಂದಿತು. ಅಂದು ಇಂಗ್ಲಿ- ಷರ ಕೈವಶವಾದ ಮಾರಿಶಸ್ ಇಂದಿಗೂ ಅವರ ಕೈಯಲ್ಲಿಯೇ ಇದೆ. ಮಾರಿ ಶಸ್ ಕಾಳಗದಲ್ಲಿ ಹೋರಾಡಿದ ಇಂಗ್ಲಿಷ್ ಪಡೆಗಳ ವಿವರ ಇಂತಿದೆ: ೧೧೩

ಬ್ರಿಟಿಶ್ ಅಧಿಕಾರಿಗಳು, ೨೬೫೩ ಬ್ರಿಟಿಶ್ ಸೈನಿಕರು, ಮತ್ತು ೧೨೪೪ ಭಾರತೀಯ ಸೈನಿಕರು. ಮರುವರುಷ ಎಂದರೆ, ೧೮೧೧ ರಲ್ಲಿ ಒಂದು ಭಾರತೀಯ ಪಡೆಯನ್ನು ಮದ್ರಾಸ್ ಬಂದರದಿಂದ ಜಾವಾ ದೇಶಕ್ಕೆ ಕಳಿಸಲಾಯಿತು. ಈ ಪಡೆಯು ಅಲ್ಲಿ ಫ್ರೆಂಚ್ ಮತ್ತು ಡಚ್ಚರನ್ನು ಸೋಲಿಸಿತು. ೧೭ ನೆಯ ಸಪ್ಟೆಂಬರ್ ೧೮೧೧ ರಲ್ಲಿ ಜಾವಾ, ಮಲಾಯಾ ಬ್ರಿಟಿಶರ ಕೈವಶವಾಯಿತು. ೧೮೧೬ ರಲ್ಲಿ ಬ್ರಿಟನ್ನು ತಾನಾಗಿಯೇ ಜಾವಾವನ್ನು ಡಚ್ಚರಿಗೆ ಮರಳಿ ಕೊಟ್ಟಿತು.

೧೮೧೮ ರಲ್ಲಿ ಮದ್ರಾಸ್ ಬಟಾಲಿಯನ್ ಸಿಲೋನಕ್ಕೆ ಕಳಿಸಿ, ಅಲ್ಲಿಯ ದಂಗೆಗಳನ್ನು ಇಂಗ್ಲಿಶ್ ಸರಕಾರ ಸದೆಬಡಿಯಿತು.

ಹೀಗೆ ಸುಮಾರು ೧೫೦ ವರುಷಗಳ ಹಿಂದೆಯೇ ಭಾರತೀಯ ಸೈನ್ಯಪಡೆಗಳು ಸಮುದ್ರದಾಚೆಗೆ ಹೋಗಿ ಕಾಳಗವನ್ನೆಸಗಿದ ಸಂಗತಿ ಆಶ್ಚರ್ಯಕರವಾದುದಾಗಿದೆ. ಆದರೆ ಇಂದಿನ ಇತಿಹಾಸ ಇದರ ವಿಷಯವನ್ನು ಮರೆತದ್ದು ವಿಷಾದದ ಸಂಗತಿ.

೧೭೪೮ ರಲ್ಲಿಯೇ ಭಾರತೀಯ ಸೈನ್ಯಪಡೆಗಳು ನಿರ್ಮಾಣಗೊಂಡರೂ—ಆ ಪಡೆಗಳಲ್ಲಿ ಶೀಖರು ಇರಲಿಲ್ಲ. ಆದರೆ ೧೮೦೯-೧೦ ರಲ್ಲಿ ರಣಜಿತಸಿಂಗನ ನೆರವಿನಿಂದ ಸೀಖ ಬಟಾಲಿಯನ್ನು ಮೊತ್ತಮೊದಲಿಗೆ ಸ್ಥಾಪಿಸಲ್ಪಟ್ಟಿತು. ಅಂದಿನಿಂದ ಇಂದಿನ ವರೆಗೆ ಸೀಖರು ಸೈನ್ಯಖಾತೆಯಲ್ಲಿ ಬಹುಭಾಗವನ್ನು ವ್ಯಾಪಿಸಿದರು.

ಭಾರತದಲ್ಲಿ ತಮ್ಮ ಅಧಿಕಾರವ್ಯಾಪ್ತಿಗಾಗಿ ಕಂಪನಿ ಸರಕಾರ ನಡೆಸಿದ ಪ್ರತಿಕಾಳಗದಲ್ಲಿ ಈ ಸೈನ್ಯಪಡೆಗಳನ್ನೆಲ್ಲ ಬಳಸಿದೆ. ಕಾಲಕಾಲಕ್ಕೆ ತಕ್ಕಂತೆ ಭಾರತೀಯರಿಗಾಗಿ ಅಧಿಕಾರ-ಪದವಿಗಳನ್ನು ಕೊಟ್ಟು ಆಕರ್ಷಣೆಯನ್ನು ಕಾಯ್ದುಕೊಳ್ಳುವ ಪ್ರಯತ್ನ ಕಂಪನಿ ಸರಕಾರ ಮಾಡತೊಡಗಿತು. ೧೮೧೭ರಲ್ಲಿ ಸುಭೇದಾರ, ಮೇಜರ್ ಎಂಬ ಹೊಸ ಹುದ್ದೆಯನ್ನು ಮೊಟ್ಟಮೊದಲಿಗೆ ಭಾರತೀಯರಿಗೆ ಕೊಡಲಾಯಿತು.

೧೮೪೦-೪೨ ರಲ್ಲಿ ಭಾರತೀಯ ಪಡೆಗಳನ್ನು ಚೀನಾ ದೇಶಕ್ಕೆ ಕಳಿಸಿ ಕೊಡಲಾಗಿತ್ತು. ಅಲ್ಲಿ ಈ ಪಡೆಗಳ ಬಲದಿಂದ ಬ್ರಿಟನ್ನು ಹಾಂಗಕಾಂಗನ್ನು

ಚೀನೀಯರಿಂದ ಪಡೆಯಿತು. ಮದ್ರಾಸ ರೆಜಿಮೆಂಟನ್ನೇ ಚೀನಕ್ಕೆ ಕಳಿಸಿ ಕೊಡಲಾಗಿತ್ತು.

೧೮೫೦ ರ ಪಂಜಾಬ ರೆಜಿಮೆಂಟು, ಬಂಗಾಲ ರೆಜಿಮೆಂಟು, ಮದ್ರಾಸ ಬಟಾಲಿಯನ್ನುಗಳನ್ನು ಬ್ರಹ್ಮದೇಶಕ್ಕೆ ಕರೆದುಕೊಂಡು ಹೋಗಿ— ರಂಗೂನನ್ನು ಹಿಡಿದುಕೊಂಡರು. ಅಂದಿನಿಂದ ಬ್ರಹ್ಮದೇಶ ಸಂಪೂರ್ಣವಾಗಿ ಇಂಗ್ಲಿಷರ ಕೈಸೇರಿತು.

೧೮೫೭ ರ ಮೇ ತಿಂಗಳಲ್ಲಿ ಬಂಡಾಯದ ಕಿಡಿ ಹಾರಿತು. ಆದರ ಇತಿಹಾಸ ಎಲ್ಲರಿಗೂ ಗೊತ್ತಿದ್ದ ಸಂಗತಿ. ಬಂಡಾಯ ಪೂರ್ವದ ಸೈನ್ಯಖಾತೆಯ ಇತಿಹಾಸ ಅದ್ಭುತವಾಗಿದೆ; ೧೮೫೩ ರ ಕಾಲದ ಸೈನಿಕರಿಗೆ ತಮ್ಮ ಸೈನ್ಯಪಡೆಗಳ ಪೂರ್ವೇತಿಹಾಸದ ಅರಿವು ಸಂಪೂರ್ಣವಾಗಿ ಇರಲೇಬೇಕು. ತಾವು ತೋರಿದ ಶೌರ್ಯ-ಧೈರ್ಯ-ತ್ಯಾಗ ಇವುಗಳಿಗೆ ಕಂಪನಿ ಸರಕಾರ ಈ ರೀತಿಯಾಗಿ ಪ್ರತಿಫಲವನ್ನು ಕೊಡುವುದನ್ನು ಕಂಡು, ಹೆಚ್ಚು ನೊಂದುಕೊಂಡೇ ಬಂಡಾಯ ದಲ್ಲಿ ಧುಮುಕಿರಬಹುದು.

---




ಶ್ರೀ. ವೆಂ. ಮು. ಜೋಶಿಯವರು ಹೊಸ ಪೀಳಿಗೆಯ ಕಥಾ ಲೇಖಕರೆಂದು ಸುಪರಿಚಿತರಾಗಿದ್ದಾರೆ. ಭಾರತೀಯ ಸಾಹಿತ್ಯಿಕರಲ್ಲಿ ಮಹಾಯುದ್ಧದ ಪ್ರತ್ಯಕ್ಷ ಅನುಭವ ಪಡೆದವರು ಇಲ್ಲವೆಂದೇ ಹೇಳಬಹುದು. ಬಂದೂಕನ್ನು ಹಿಡಿದ ವೆಂ. ಮು. ಅವರ ಕೈ, ಸಾಹಿತ್ಯದಲ್ಲೂ ಅಷ್ಟೇ ಪಳಗಿದೆ. ಯುದ್ಧದ ವಾರ್ತೆಗಳನ್ನು ಬರಿ ಕೇಳುವದೂ ಕೂಡ ರಮ್ಯವಾಗಿರುವಾಗ ಕನ್ನಡದಲ್ಲಿ ಆ ಜೀವನವನ್ನು ಸುರಮ್ಯ ಸಾಹಿತ್ಯವಾಗಿ ರೂಪಿಸಿದ ಪ್ರತ್ಯೇಕತೆ ಅವರದೇ. ಅದನ್ನವರು ಇದುವರೆಗೆ ತಮ್ಮ ಹಲವು ಸಣ್ಣ ಕತೆ ಮತ್ತು " ಸಮರ ಸೌದಾಮಿನಿ " ಕಾದಂಬರಿಗಳಲ್ಲಿ ನೀಡಿದ್ದುಂಟು. ಈಗ ಅವರ ವೈಶಾಲ್ಯವನ್ನು ಪ್ರಸ್ತುತ ' ಸೈನಿಕ ಉವಾಚ 'ದಲ್ಲಿ ಪ್ರಸ್ತಾಪಿಸಿದ್ದಾರೆ.

ಇವರ ' ಹೊಸ ಬೆಳಕು ' ಕಥಾ ಸಂಗ್ರಹಕ್ಕೆ ಮುಂಬಯಿ ಸರಕಾರದಿಂದ ೫೦೦ ರೂಪಾಯಿಗಳ ಪುರಸ್ಕಾರ ದೊರೆತಿದೆ.